# ಬಲೀಂದ್ರನ ಸಂಧಿ

ಅರೆಬಾಸೆಲಿ

ಮೂಲ ತುಳು : ಉಗ್ಗಪ್ಪ ಪೂಜಾರಿ
ಅನುವಾದ : ಕುಂಞೇಟಿ ಶಿವರಾಮ ಗೌಡ






ದಶವರ್ಷ ಸಂಭ್ರಮದ ಪುಸ್ತಕಮಾಲಿಕೆ 2021

# ಬಲೀಂದ್ರನ ಸಂದಿ

## (ಅರೆಬಾಸೆಲಿ)

ಮೂಲ ತುಳು : ಉಗ್ಗಪ್ಪ ಪೂಜಾರಿ

ಅನುವಾದ :

**ಕುಂಞೇಟಿ ಶಿವರಾಮ ಗೌಡ**



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಮಡಿಕೇರಿ

Decennial Year Publication Series 2021

**ಬಲೀಂದ್ರನ ಸಂದಿ (ಅರೆಬಾಸೆಲಿ)**
**BALIYENDRA SANDI**
Tuluvala Baliyendre authored by Uggappa Poojary in Tulu language
Translated into Arebase as Baliyendra Sandi

Written by
**Kunhetti Shivarama Gowda**
Kollamogra Post & Village Sullia Taluk, Dakshina Kannada District
Mobile: 8762121694

**ಸಲಹಾ ಸಮಿತಿ :**
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಶ್ರೀಮತಿ ಸ್ಮಿತಾ ಅಮೃತರಾಜ್
ಡಾ. ವಿಶ್ವನಾಥ ಬದಿಕಾನ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀ ಭರತೇಶ ಅಲಸಂಡೆಮಜಲು

ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪ ಬಿಲ್ಡಿಂಗ್, ರಾಜಸೀಟ್ ರಸ್ತೆ, ಮಡಿಕೇರಿ
ದೂ: 08272-223055, ಮೊ : 6362522677
arebaseacademy@gmail.com, www.arebasheacademy.gov.in

ಪ್ರಕಟಣೆಯ ವರ್ಷ : 2021


ಪುಟಗಳು : 40
ಬೆಲೆ : ರೂ. 45
ಪ್ರತಿಗಳು : 300

ಆಕಾರ : ಡೆಮಿ 1/8
ಕಾಗದ : 80 ಜಿಎಸ್‌ಎಂ ಮ್ಯಾಪ್ಲಿತೋ
ಮುಖಪುಟ ವಿನ್ಯಾಸ : **ಕಲ್ಲೂರು ನಾಗೇಶ**

ಪುಟವಿನ್ಯಾಸ ಮತ್ತು ಮುದ್ರಣ
**ಆಕೃತಿ ಪ್ರಿಂಟ್ಸ್**
ಲೈಟ್‌ಹೌಸ್ ಹಿಲ್ ರಸ್ತೆ, ಮಂಗಳೂರು – 575 001
ದೂ: 0824 2972002

## ಅಧ್ಯಕ್ಷರ ಮಾತು

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಕಟಣ ಯೋಜನೆ ಅಡಿಲಿ ಶ್ರೀಯುತ ಶಿವರಾಮ ಕುಂಞೇಟಿಯವು ಅನುವಾದಿಸಿದ 'ಬಲೀಂದ್ರ ಸಂಧಿ' ಪ್ರಕಟ ಆಗುತ್ತುಟ್ಟು ಹೇಳುವಂತದ್ದು ಕುಸಿನ ವಿಷಯ. ಸಂದಿ ಪಾಡ್ದನಗ ತುಳು ಸಂಸ್ಕೃತಿಯ ಒಂದು ಭಾಗ. ದ.ಕ.ದ ಅರೆಬಾಸಿಗರ ಮೇಲೆ ಕೂಡ ಇದರ ಪ್ರಭಾವ ಉಟ್ಟು. ಆದರೆ ಈ ಸಂದಿ ಪಾಡ್ದನಗ ನಮ್ಮ ಅರೆಬಾಸೆಲಿ ಇಲ್ಲೆ. ತುಳುಲಿ ಇರುವ ಬಲೀಂದ್ರ ಸಂದಿನ ಅರೆಬಾಸೆಗೆ ತಂದ್ ಕುಂಞೇಟಿ ಶಿವರಾಮನವು ಒಳ್ಳೆ ಕೆಲ್ಸ ಮಾಡಿಯೊಳೊ. ತುಳು ಸಂದಿನ ಅರೆಬಾಸೆಗೆ ತಾದು ಅಷ್ಟು ಸುಲಭದ ಕೆಲ್ಸ ಅಲ್ಲ. ಅಂತದರ್‌ಲಿ ಈ ಪ್ರಯತ್ನಕ್ಕೆ ಕೈ ಹಾಕಿ ಅದರ್‌ಲಿ ಶ್ರೀಯುತರ್ ಗೆಲುಸಾದಿಸಿಯೊಲೊ ಅಂತ ಹೇಳಕ್. ಒಳ್ಳೆದ್ ಯಾವುದೇ ಇರ್‌ಲಿ ಅದ್ ನಮ್ಮ ಬಾಸೆಗೆ ಬರೋಕು. ಹಂಗಾಗಿ ಅನುವಾದ ಸಾಹಿತ್ಯಲಿ ಕೂಡ ಅರೆಬಾಸೆ ಹೆಸ್ರು ಮಾಡೋಕು. ಅರೆಬಾಸೆಲಿ ಬಲೀಂದ್ರ ಸಂದಿ ಬಂದುಟು. ಇಂತಹ ಮತ್ತಷ್ಟು ಕೆಲ್ಸಗ ಆಕು. ಅರೆಬಾಸೆಗೆ ಅವೆಲ್ಲ ಬರೋಕು ಹೇಳುವಂತದ್ದೆ ನಮ್ಮ ಆಶಯ. ಇಂತಹ ಆದೆಷ್ಟೋ ಜಾನಪದ ಸಂಸ್ಕೃತಿ ಬೇರೆ ಬಾಸೆಲಿ ಇದ್ದರೂ ನಮ್ಮ ಬಾಸೆ, ಸಂಸ್ಕೃತಿನ ಒಟ್ಟಿಗೆ ಕೂಡಾ ಸೇರಿಕೊಂಡುಟು. ಮುಂದಿನ ದಿನಗಳಲಿ ಅವೆಲ್ಲ ಅರೆಬಾಸೆಗೆ ಬರೋಕು. ಈ ದಿಕ್ಕ್‌ಲಿ ಕುಂಞೇಟಿ ಶಿವರಾಮನವು ಒಂದು ಅಡಿಗಲ್ಲು ಹಾಕಿಯೊಳೊ. ಇದಿಕ್ಕೆ ಬದ್ರ ಬುನಾದಿ ಹಾಕುವ ಕೆಲ್ಸ ನಮ್ಮ ಅರೆಭಾಷಿಗ ಪ್ರತಿಭೆಗಳ ಕೈಯಿಂದ ಆದರೆ ಇಂತಹ ಪ್ರಯತ್ನ ಸಾರ್ಥಕ ಆದೆ.

**ಲಕ್ಷ್ಮೀನಾರಾಯಣ ಕಜೆಗದ್ದೆ**

# ಬರ್ದವರ ಮಾತ್

ಬಲಿ ಚಕ್ರವರ್ತಿನ ಕತೆ ತುಳು ಬಾಸೆಲಿ 'ತುಳುವಾಲ ಬಲಿಯೇಂದ್ರ'ಂತ ಸಂಧಿ ಮತ್ತೆ ಕತೆನ 1948ನೇ ಇಸವಿಲಿ ನಂದೊಳಿಕೆ ಶೀನಪ್ಪ ಹೆಗ್ಡೆವು ಸಂಗ್ರಹ ಮಾಡಿ ಪ್ರಕಟಿಸಿದ್ದೊ. ಈ ಪುಸ್ತಕದ ಪ್ರತಿಗ ಸಿಕ್ಕದ ಕಾರಣ ಇದರ ತಿದ್ದಿ ಇನ್ನೂ ಒಳ್ಳೆ ರೀತಿಲಿ ಬರ್ದ್ ಪ್ರಕಟಣೆ ಮಾಡ್ದವು ಮೂಡಬಿದ್ರೆನ ತುಳು ಸಾಹಿತಿ ಶ್ರೀ ಉಗ್ಗಪ್ಪ ಪೂಜಾರಿಗ. ಇದ್ ತುಳು ಸಂಸ್ಕೃತಿಗೆ ಸಂಬಂದಪಟ್ಟ ಜಾನಪದ ಸಂದಿ. ತುಳುನಾಡ್ಲಿ ಇರ್ರ್ವ ಹತ್ತ್ ಕುಟುಂಬ ಹದಿನೆಂಟ್ ಬಳಿಗೆ ಸೇರ್ದವೂ ಬಾರಿ ಪುರಾಕ್ಂದಳೇ ಬಲೀಂದ್ರ ಹಬ್ಬನ ಆಚರಣೆ ಮಾಡ್ತಾವೊಳೊ.

ಶ್ರೀ ಉಗ್ಗಪ್ಪ ಪೂಜಾರಿಗಳ ದೂರವಾಣಿಲಿ ಸಂಪರ್ಕ ಮಾಡ್ಕನ ಅವು ಸಂಗ್ರಹಿಸಿ ಬರ್ದ ತುಳುವಾಲ ಬಲಿಯೇಂದ್ರ ಸಂದಿನ ಅರೆಬಾಸೆಲಿ ತರ್ಜುಮೆ ಮಾಡಿ ಬರೆಕೆ ಬಾರಿ ಉಮೇದಿಲಿ ಒಪ್ಪಿಗೆ ಕೊಟ್ಟೊಳೊ. ಬಲಿಯೇಂದ್ರ ಸಂದಿ ಹಳೆ ತುಳು ಸಬ್ದಗಳಿಗೆ ಕನ್ನಡ ಅರ್ತನ ಬರ್ದ್‌ಕೊಟ್ಟ್ ಉಪಕಾರ ಮಾಡ್ಯೊಳೊ. ಅವರ ಸಹಕಾರನ ನೆನ್ಸಿ ಅವುಕ್ಕೆ ಕೃತಜ್ಞತೆ ಸಲ್ಲಿಸಿನೆ.

ಮೂಲ ತುಳು ಸಂಧಿನ ಅರೆಬಾಸೆಗೆ ತರ್ಜುಮೆ ಮಾಡಿ ಬರೆದು ಬಾರಿ ಕಷ್ಟದ ಕೆಲ್ಸಂತ ನನ್ನ ಅನುಭವ. ಇದ್ ನನ್ನ ಸುರುನ ಪ್ರಯತ್ನ. ಬಾಸಾ ಪ್ರಯೋಗಲಿ ತುಂಬಾ ಹೆಚ್ಚಿ ಕಮ್ಮಿ ಕಾಂಬೊದು. ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡಮಿನ ಅಧ್ಯಕ್ಷರಾದ ಕಜೆಗದ್ದೆ ಲಕ್ಷ್ಮಿನಾರಾಯಣನವರ ಪ್ರೋತ್ಸಾಹಂದ ಈ ಕೆಲ್ಸ ಪೂರೈಸೊಳೆ. ಅವುಕ್ಕೆ ನಾ ಈ ಸಂದರ್ಬಲಿ ಅಬಾರ ವ್ಯಕ್ತಪಡ್ಸಿನೆ.

ನಾ ಬರ್ದ ಬಲೀಂದ್ರ ಸಂದಿನ ಓದಿ ಸೂಕ್ತ ತಿದ್ದುಪಡಿ ಸೂಚಿಸಿದ ನಿಡ್‌ಂಜಿ ಡಾ. ಕರುಣಾಕರ ಇವುಕ್ಕೆ ಕೃತಜ್ಞತೆ ಸಲ್ಲಿಸಿನೆ. ಮೂಲ ಕರಡು ಪ್ರತಿನ ಅಕ್ಷರ ಜೋಡನೆ ಮಾಡ್ದ ಶ್ರೀ ಸವಿತಾರ ಮುಡೂರು, ಮುಡೂರು ಇನ್ಫೋಟೆಕ್ ಪಂಜ ಇವುಕ್ಕೆ ಋಣಿಯಾಗಿವೊಳೆ.

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ ಇವು ಈ ಪುಸ್ತಕನ ಪ್ರಕಟಣೆ ಮಾಡಿ ಸಹಕರಿಸಿಯೊಳೊ. ಅಕಾಡೆಮಿ ಅಧ್ಯಕ್ಷ ಮತ್ತೆ ಎಲ್ಲ ಸದಸ್ಯರಿಗೆ ಧನ್ಯವಾದ ಸಲ್ಲಿಸಿದೆ.

ಬಲೀಂದ್ರ ಸಂದಿನ ಒಂದೆರ್ಡ್ ತಲೆಮಾರ್ ಹಿಂದೆ ಬೊಳ್ಕ್‌ಮರ ಮನೆಬಾಗ್‌ಲಿ ಹಾಕಿ ಸಿಂಗಾರ ಮಾಡಿ ಬಲಿಪಾಡ್ಯದಿನ ಬಲೀಂದ್ರ ಪೂಜೆ ಮಾಡಿ ಸುರೂಂದ ಅಕೇರಿವರೆಗೆ ಹೆಳ್ತಿದ್ದೊ ಗಡ. ಆಗನ ಕಾಲಲಿ ಬೊಳ್ಕ್‌ಮರಕೆ ಕೊರ್ಚುದು (ಕೂ–ಕೂ–ಕೂ ಬಲೀಂದ್ರ) ಒಂದು ಸಂಪ್ರದಾಯ. ಆದಿನ ಬಲೀಂದ್ರ ಚಕ್ರವರ್ತಿ ತನ್ನ ಪ್ರಜೆಗಳ ನೋಡಿ ಹೋಕ್ಕೆ ಬೂಮಿಗೆ ಬಂದದೆಂತ ಜನರ ನಂಬಿಕೆ. ಬಲೀಂದ್ರ ಪೂಜೆ ತುಳುನಾಡ್ಲಿ ಮನೆ, ದೈವಸ್ತಾನ, ದೇವಸ್ತಾನಗಳಲ್ಲಿ ಈಗಳೂ ನಡೆತಾ ಉಟ್ಟು. ಆದರೆ ಬಲೀಂದ್ರ ಸಂದಿ ಹೇಳೊವು ಎಲ್ಲೊ ಸಾವಿರಕೊಬ್ಬ ಇರ್ಕು ಸಾಕ್ ಅಷ್ಟೆ. ಈ ಸಂದಿನ ಅಬ್ಯಾಸಮಾಡಿ ನಮ್ಮ ಸಂಸ್ಕೃತಿ ಸಂಪ್ರದಾಯ ಉಳ್ಸಿ ಬೆಳ್ಸಿಕೆ ತರುಣ ಪೀಳಿಗೆ ಹುರುಪಿಂದ ಕೆಲ್ಸ ಮಾಡೊಕುಂತ ನನ್ನ ವಿನಂತಿ.

ಈ ಪುಸ್ತಕಲಿ ತುಂಬಾ ನ್ಯೂನತೆಗೆ ಕಂಡ್ ಬಾವುದು. ಸಹೃದಯ ಓದುಗರ್ ಸೂಕ್ತ ಸಲಹೆ ಸೂಚೆನೆಗಳ ಕೊಡುಕುಂತ ಪ್ರಾರ್ಥನೆ.

**ಕುಂಞೇಟಿ ಶಿವರಾಮ ಗೌಡ**
ಕೊಲ್ಲಮೊಗ್ರ ಗ್ರಾಮ, ಸುಳ್ಯ ತಾಲೂಕು,
ದ.ಕ. 574218
ಫೋ: 8762121694

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಅಧ್ಯಕ್ಷರು
**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರು**
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀಮತಿ ಸ್ಮಿತಾ ಅಮೃತರಾಜ್
ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ
ಶ್ರೀ ಧನಂಜಯ ಅಗೋಳಿಕಜೆ
ಶ್ರೀ ದಂಬೆಕೋಡಿ ಎಸ್. ಆನಂದ
ಡಾ. ಕೂಡಕಂಡಿ ದಯಾನಂದ
ಶ್ರೀ ಕುಸುಮಾಧರ ಎ.ಟಿ.
ಡಾ. ವಿಶ್ವನಾಥ ಬದಿಕಾನ
ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ
ಶ್ರೀ ಪುರುಷೋತ್ತಮ ಕಿರ್ಲಾಯ
ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು
ಶ್ರೀ ಕಿರಣ್ ಕುಂಬಳಚೇರಿ
ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**

## ಪ್ರಾರ್ಥನೆ

ಬಲಿರಾಜ ನಮಸ್ತುಭ್ಯಂ ವಿರೋಚನ ಸುತ ಪ್ರಭೋ ।
ಇಂದ್ರ ಶತ್ರೋ ಮರಾರಾತೇ ದೈತ್ಯದಾನವ ಪೂಜಿತ ॥
ಧ್ಯಾಯೇದ್ಬಲೀಂದ್ರಂ ಜಗದೇಕನಾಥಂ ।
ಮುಕ್ತಾ ಫಲಾಲಂಕೃತ ಸರ್ವ ಗಾತ್ರಮ್ ।
ನಕ್ಷತ್ರನಾಥಂ ಭುವಾನಾರ್ಘ್ಯವಸ್ತ್ರಂ
ಪ್ರಿಯಂ ಮುರಾರೇಃ ಕರವಾಲ ಹಸ್ತಮ್ ॥

ದೈತ ದಾನವದೊರೆ ವಿರೋಚನ ಮಂಙ ।
ಸದಾ ದೇವೇಂದ್ರನ ಕಡು ವೈರಿ ।
ಸತ್ಯಲಿ ನಡ್ಡ್ ಕೀರ್ತಿನ ಪಡ್ಡ ಬಲೀಂದ್ರ
ಮೂರ್ ಲೋಕಲಿ ಹೆಸ್ರ್ ಪಡ್ಡ ಬಲೀಂದ್ರಂಗೆ ನಮೋ, ನಮೋ
ಬಾ ಬಾ ಬಾ ಬಲೀಂದ್ರ ನಾವು ಕೊಟ್ಟ ಬಲಿ ತಕ ಬಲೀಂದ್ರ
ಸಿರಿ ಸಿರಿ ಸಿರಿ ಬಲೀಂದ್ರ, ಬಲೀಂದ್ರ, ಬಲೀಂದ್ರ
ಹೋ..... ಹೋ...... ಹೋ...... ಕೂ–ಕೂ–ಕೂ

# ಒಂದನೆ ಸಂದಿ

ಸಿರಿ ಬಲೀಂದ್ರ ಸಿರಿ ಬಲೀಂದ್ರ ಬೂಮಿ ಮಂಜ ಬಲೀಂದ್ರ
ಬೂಮಿ ಆಳ್ದ ಬಲೀಂದ್ರ ಎಲ್ಲಿ ಹುಟ್ಟಿತ್ ಬಲೀಂದ್ರ
ಎಲ್ಲಿ ಬೆಳ್ತ್ ಬಲೀಂದ್ರ ಏನ್ ಮಾಡ್ತ್ ಬಲೀಂದ್ರ
ಎಲ್ಲಿ ಹೋತ್ ಬಲೀಂದ್ರ ಎನ್ ಅತ್ ಬಲೀಂದ್ರಂತ ಕೇಳ್ಕನ ।

ಗಣಗಳ ನಾಯಕ ಗಣಪತಿ ದೇವ್ರ್ ನೆನ್ಸಿ
ಜಗತ್ತಿಗೆ ನಾಯಕ ಈಸ್ವರ ದೇವ್ರ್‌ಗೆ ಕೈ ಮುಗ್ದ್
ಲೋಕಕ್ಕೆ ಅವ್ವಂತ ಹೆಸ್ರ್ ಪಡ್ದ ಪಾರ್ವತಿಗೆ ಅಡ್ಡಬಿದ್ದ್
ಎಂಟ್ ದಿಕ್ಕಿನ ದೆವ್ವ ದೇವ್ರ್‌ಗೆ ತಲೆ ಬೊಗ್ಸಿ.
ಕುಲದೇವ್ರ್ ವೆಂಕಟರಮಣಂಗೆ ಬಕ್ತಿಲಿ ಪೂಜೆ ಮಾಡಿ
ತುಳು ಬಾಸೆಲಿರ್ವ ಬಲೀಂದ್ರ ಸಂದಿನ ಅರೆಬಾಸೆಲಿ
ಬರೆಕೆ ಮಹಾ ವಿಷ್ಣುನ ಆರ್ಶೀವಾದ ಕೇಳಿಕಂಡ್ ಅಡ್ಡಬಿದ್ದನೆ ।
ಹೋ........ಹೋ...........ಹೋ.......... ಕೂ........ಕೂ.........ಕೂ.........

ವರ್ಸಕೆ ಮೂರ್ ಉತ್ಸವ ಕಾಲಕಾಲಕೆ ಪರ್ವಗ ।
ಸುಬ ನಕ್ಷತ್ರಲಿ ಹೋಮ, ಹೋಮದೊಟ್ಟಿಗೆ ನೇಮ,
ನೇಮಲಿದಾನ, ದಾನಂದ ಹೆಚ್ಚಿ ದರ್ಮ ಸಾವಿರ ಸಾವಿರ
ಹಾರೊವುಕೆ ನಿತ್ಯ ಊಟ ಕೊಟ್ಟು ಸುಕ ಸಂತೋಸಲಿ
ರಾಜ್ಯ ಬಾರ ಮಾಡ್ತಿತ್ತ್‌ಗಡ ಈ ನಾಡಿಲಿ ಬಲಿಚಕ್ರವರ್ತಿ
ಹೋ........ಹೋ...........ಹೋ.......... ಕೂ–ಕೂ–ಕೂ

ಬೂ ಮದ್ಯಲಿರ್ವ ರಾಜ್ಯಲಿ ದೊಡ್ಡ ಹಳ್ಳದ ಕರೆಲಿ
ಪುಣ್ಯದ ಜಾಗೆಲಿ ಕರ್ಮನ ಕಳೆಕೆ ಹೋಮ, ಹೋಮದೊಟ್ಟಿಗೆ
ನೇಮ, ನೇಮಲಿ ದಾನ ದಾನಂದ ಹೆಚ್ಚಿ ದರ್ಮ ನಡ್ಸ್‌ತಾ ಇತ್ತ್ ಬಲಿಚಕ್ರವರ್ತಿ
ಹೋ..........ಹೋ........ಹೋ....... ಕೂ–ಕೂ–ಕೂ

ಮೂಡಬುಡ್ಕೆ ಮುಂದೆ ಎದ್ದ್ ತಲೆ ಮೈ
ಸುದ್ದಕೆ ಸಾವಿರ ಕೊಡ್ಪಾನ ತಣ್ಣೀರ್ ಸಾವಿರ ಕೊಡ್ಪಾನ ಬಿಸಿ
ನೀರ್ ಮೀತ್ತ್‌ಗಡ. ಬೂಮಿ ಪುತ್ರ ಬಲೀಂದ್ರ
ಹೋ..........ಹೋ.........ಹೋ........ ಕೂ–ಕೂ–ಕೂ

ಸಿರಿಮುಡಿ ಕಟ್ಟಿಕೆ ಕಾವೂರಿನ ಕರಿ ಪಟ್ಟೆ, ಬೋಳೊರಿನ ಬೆಳಿಪಟ್ಟೆ,
ಮಣೇಲ್‌ಂದ ಅರ್ಸಿನ ಪಟ್ಟೆ, ಇಟ್ಟೇಲ್‌ಂದ ಪಚ್ಚೆ ಪಟ್ಟೆ
ಕಾಸಿ ಕಂಬ್ಯಾ, ಮುನ್ನೂರ್ ಮೊಳದ ಪಾರ್ ಪರ್‌ದೇಸಿ ಪಟ್ಟೆ
ಕಣ್ಣೀರ್ಲಿ ನೆನೆವ ಕಂಚಿ ಪಟ್ಟೆ, ಬೆರ್ಳ್ ಉಗ್‌ರ್‌ಲಿ ನಿಲ್ಲುವ
ಮರವೂರ ಪಟ್ಟೆ ತರ್ಸಿತ್ ಗಡ, ಏಳ್ ಪೆಟ್ಟಿಗೆಲಿರ್ವ್ ಪಟ್ಟೆ
ಸೀರೆನ ತಂದ್ ಸಿಂಗಾರ ಮಾಡ್ತಾವುಟ್ಟು ಬಲೀಂದ್ರ
ಹೋ..........ಹೋ.........ಹೋ........ ಕೂ–ಕೂ–ಕೂ

ಬಕ್ತಿಗೆ ಬಸ್ಮ, ಪೊರ್ಲುಗೆ ಗಂದ, ಅಂದಕೆ ಚಂದನ ಪೂಜಿತ್,
ಎದೆಗೆ ಚಿನ್ನದ ಪದಕ, ಕುತ್ತಿಗೆಗೆ ಚಕ್ರಸರ, ಪೊರ್ಲಿಗಾಗಿ ನೆಲ್ಲಿಮಾಲೆ
ಗೆಲ್‌ವಿಗೆ ಗೆಲುವಂದ ಮಾಲೆ, ಹಾಕಿ ಸಜ್ಜಾಗಿ ನಿತ್ತತ್‌ಗಡ ಬಲೀಂದ್ರ
ಹೋ..........ಹೋ.........ಹೋ........ ಕೂ–ಕೂ–ಕೂ

ಸೊಂಟಕೆ ಓಡ್ಯಾಣ, ಕೈಗಳಿಗೆ ಚಿನ್ನದ ಕಡಗ, ಕೆಬಿಗೆ ಮುತ್ತು
ಮಾಣಿಕ್ಯದ ಬಾವುಲಿ, ಬೆರ್ಳಿಗೆ ಮುತ್ತಿನ ಮುದ್ರೆ ಉಂಗಿಲ,
ಕೈಲಿ ಬಾಳ್‌ಕತ್ತಿ, ಬಿಲ್ಲ್‌ಬಾಣ ಹಿಡ್ದ್ ರಾಜಸಬೆಗೆ ಬಾತ್‌ಗಡ ಬಲೀಂದ್ರ ರಾಜ।
ಹೋ..........ಹೋ.........ಹೋ........ ಕೂ–ಕೂ–ಕೂ

ಸಿಂಹಾಸನಲಿ ಕುದ್ದ್ ಮಂತ್ರಿ ಬುದ್ಯಂತರ ಕರ್ಸಿ
ಯಾಗ ನಡ್ಸಿಕೆ ಜಾತಿಲಿ ಮೇಲಾದ ಪಂಚವರ್ಣದ ಕುದ್ರೆನ
ತರ್ಸಿಕೆ ಅಪ್ಪಣೆ ಮಾಡ್ತ್ ಬಲಿಚಕ್ರವರ್ತಿ.
ಹೋ..........ಹೋ.........ಹೋ........ ಕೂ–ಕೂ–ಕೂ

ಆ ಹೊತ್ತಿಗೆ ಕರಿ ಕೆಬಿನ, ಕೆಂಚಿ ಮೋರೆನ , ಬೆಳಿ ಬೀಲದ
ಐದ್ ಬಣ್ಣದ ಕುದ್ರೆನ ಯಾಗ ಸಾಲೆಗೆ ತರ್ಸಿತ್ ಬಲೀಂದ್ರ

ಪಟ್ಟದ ಕುದ್ರೆಗೆ ಪೂಜೆ ಮಾಡ್ಸಿ, ಕಾಲಿಗೆ ಬೆಳ್ಳಿ ಸಿರಿಗೆಜ್ಜೆ,
ಕುತ್ತಿಗೆಗೆ ಮುತ್ತುನ ಮಾಲೆ, ತಲೆಗೆ ಚಿನ್ನದ ತಲೆ ಪಟ್ಟ ಕಟ್ಟಿ ಹೂ,
ಪಿಂಗಾರಲಿ ಸಿಂಗಾರ ಮಾಡಿ ಯಾಗದ ಒಕ್ಕಣೆ ಬರ್ದ್
ಪಟ್ಟದಕುದ್ರೆ ತಲೆಗೆ ಕಟ್ಸಿತ್ ಬಲಿಚಕ್ರವರ್ತಿ
ಹೋ..........ಹೋ.........ಹೋ........ ಕೂ–ಕೂ–ಕೂ

ಪಟ್ಟದಕುದ್ರೆ ಎದ್ರ್ ಬುಟ್ಟ್, ಹಿಂದೆಂದ ಬಾರಿ ದಂಡ್ ಹೊರ್ಟತ್।
ಸಾಯಕೆ ಸಾಮಂತರ್, ದಂಡಿಗೆ ದಲವಾಯಿಗ, ಸೇರ್ದ್ರೊ
ದೋಲು, ನಗಾರಿ, ಸಂಕ, ಜಾಗಟೆ ಬಾರ್ಸಿ ಕೊಂಬು ಕಹಳೆ
ಸಬ್ದಲಿ ಅರ್ಸು ಬಲ್ಲಾಳ್‌ಗ, ಜ್ಯೆನ ಸೆಟ್ಟಿಗ, ಜಂಗಿ ಜಂಗಮಗ,
ಸಾದು ಸನ್ನೇಸಿಗ ಕಾಡ್ ಮೇಡ್‌ಲಿರ್ವ ಜನಗಳಿಗೆ ಕಟ್ಟಪ್ಪಣೆ
ಮಾಡ್ತ್ ಬೂಮಿ ಪುತ್ರ ಬಲೀಂದ್ರ ।
ಹೋ..........ಹೋ.........ಹೋ........ ಕೂ–ಕೂ–ಕೂ

ಬಾರಿ ದೊಡ್ಡ ದಂಡ್ ನಗಾರಿ ಸಬ್ದಲಿ ಹೊರ್ಟ ಪಟ್ಟದ ಕುದ್ರೆನ
ಗೌಜಿ ನೋಡಿ ತುಂಡರಸುಗ, ಬಲ್ಲಾಳ್‌ರ್, ಜ್ಯೆನ ಸೆಟ್ಟಿಗ
ಕ್ಯೆ ತುಂಬಾ ಕಪ್ಪ ಕಾಣಿಕೆ ಕೊಟ್ಟು ರಾಜನ ಸಾಯಕೆ ನಿತ್ತೊಗಡ ।
ಹೋ.........ಹೋ............ಹೋ........... ಕೂ–ಕೂ–ಕೂ

ಬಲೀಂದ್ರನ ಬಾರಿ ದೊಡ್ಡ ದಂಡ್ ಪಟ್ಟದ ಕುದ್ರೆನ
ಎದ್ರ್‌ಲಿ ಬುಟ್ಟು ದೋಲು ನಗಾರಿ, ಸಂಕ ಜಾಗಟೆ, ಕೊಂಬು
ಕಹಳೆನ ಸಬ್ದಲಿ ಆಕಾಸಕೆ ಮುಟ್ಟುವಸ್ಟ್ ದೂಳು ಎದ್ರ್‌ಸಿ
ಬಾವುದರ ನೋಡಿ ಸ್ವರ್ಗಲಿರ್ವ ಮೂವತ್ತಮೂರ್ ಕೋಟಿ ದೇವತೆಗಳಿಗೆ
ಮನ್ಸಿಲಿ ಮಚ್ಚರ ಹೊಟ್ಟೆಲಿ ಹುಳ್ಕು ಸುರುಆತ್ ಗಡ.।
ಹೋ.........ಹೋ............ಹೋ........... ಕೂ–ಕೂ–ಕೂ

ಏನಾರ್ ಮಾಡಿ ಬಲೀಂದ್ರನ ಸೋಲ್ಸಿ ಓಡ್ಸೂಕುಂತ
ದೇವತೆಗ ಸಭೆ ಸೇರಿ ಮೂರ್ ಇರ್ಲ್, ನಾಕ್ ಹಗ್ಲ್ ಚರ್ಚೆ
ಮಾಡಿ ಸಬೆಗೆ 'ಕಲಿಯುಗಾಂತ' ಒಂದು ಹಾಳ್ ಸಕ್ತಿನ
ಕರ್ಸಿ ಹೇಳ್ದೊ ಗಡ, ಏನ್‌ಂತೇಳ್ರೆ, ಬೇಗ ನೀ ಹೋಗಿ ಬಲೀಂದ್ರನ

ರಾಜ್ಯಲಿ ಕಷ್ಟ, ನಷ್ಟ, ಸುಳ್ಳು, ಮೋಸ, ಕೊಲೆ, ಸುಲಿಗೆ ಮಾಡಿ,
ದರ್ಮ ನೀತಿನ ಹಾಳ್ ಮಾಡಿ ಬರೊಕುಂತ 'ಕಲಿಯುಗಕ್ಕೆ'
ವೀಳ್ಯಕೊಟ್ಟು ಕಳ್ಸಿದೊ ಗಡ ದೇವತೆಗ।
ಹೋ........ಹೋ...........ಹೋ.......... ಕೂ–ಕೂ–ಕೂ

ದೇವತೆಗಳ ರಾಜ ದೇವೇಂದ್ರನ ವೀಳ್ಯ ತಕಂಡ್
'ಕಲಿಯುಗ' ಸೀದಾ ಹೊರ್ಟ್ತ್, ಕೆಂಚಿ ಮೊಸೆನ, ಡೊಂಕು
ಮೂಂಗುನ, ಕುಪ್ಪಳುಕಣ್ಣ್‌ನ, ಮೊಂಟುಕಾಲ್‌ನ, ಚೊಟ್ಟೆ ಕೈನ,
ಕರಿಕಪ್ಪು ವರ್ಣದ ವೇಸಲಿ ಬಂದ್ ಕಂಡ ಕಂಡಲ್ಲಿ
ಬಾರಿ ಅನ್ಯಾಯ, ಅನಾವುತ, ಮಾಡ್ತಾ ಇರ್ಕನ ಬಲೀಂದ್ರನ
ಅಣ್ಣ ಸುಕ್ರಾಚಾರ್ಯರ ಕರ್ಸಿ ಬಲ್ಮೆ ನೋಡ್ಕೆ ಹೇಳ್ಕನ
ಇದೆಲ್ಲ 'ಕಲಿಯುಗದ' ಅನಾವುತಂತ ಕಂಡ್ ಬಾತ್ ಗಡ।
ಹೋ........ಹೋ...........ಹೋ.......... ಕೂ–ಕೂ–ಕೂ

ದೇವತೆಗಳ ಚಾಡಿ ಮಾತಿನಾಂಗೆ 'ಕಲಿಯುಗ'
ಮಾಡ್ದ ಅನ್ಯಾಯ ಗೊತ್ತಾಗಿ ಬಾರಿ ಸಿಟ್ಟಿಲಿ ಬೂಡ್ ಬಲ್ಲಾಳ್ರ
ಕರ್ಸಿ ಚಿನ್ನದ ಸಂಕಲೆ ತಂದ್ ಬಲ್ದ ಕಾಲಿಗೆ, ಬೆಳ್ಳಿ ಸಂಕಲೆ
ತರ್ಸಿ ಎಡ್ದ ಕಾಲಿಗೆ ಹಾಕ್ಸಿತ್, ಗಟ್ಟಿನ ಕಬ್ಬಿಣ ಸಂಕಲೆ
ತರ್ಸಿ ನಡು ಸೊಂಟಕೆ ಬಿಗ್ಸಿತ್, ಕೈ ಕಾಲ್ ಕಟ್ಟಿ ಕಲಿಯುಗನ
ಅಟ್ಟಲಿ ಹಾಕ್ಸಿತ್‌ಗಡ ಬಲಿಚಕ್ರವರ್ತಿ
ಹೋ........ಹೋ...........ಹೋ.......... ಕೂ–ಕೂ–ಕೂ

ದೇವತೆಗ ಮಾಡ್ದ ಹುಳ್ಕು ಮಚ್ಚರ ಗೊತ್ತಾಗಿ
ಅವರ ಮೇಲೆ ಯುದ್ದ ಮಾಡ್ಕೆ ಅಪ್ಪಣೆ ಕೊಟ್ಟತ್ ಬಲೀಂದ್ರ।
ಸೈನ್ಯಕ್ಕೆ ಸಿಪಾಯಿಗ, ಆನೆ, ಕುದ್ರೆ, ರತ, ಸೇರಿ ದಂಡ್
ತಯಾರಾತ್ ಬಿಲ್ಲವುಕೆ ಬಿಲ್ಲ್ ಬಾಣ, ಬಂಟ್ರೆಗೆ ಮಚ್ಚಿಕೊಡ್ಲಿ
ಕಟ್ಟಾಳಿಗೆ ಬಾಳ್‌ಕತ್ತಿ, ಆಯುದ ಹಿಡ್ದ್ ತಯಾರಾತ್ ಸೈನ್ಯ.
ಹೋ..........ಹೋ.........ಹೋ........ ಕೂ–ಕೂ–ಕೂ

ದಂಡಿನ ನಗಾರಿ ಗುದ್ದಿ ಸೂಚನೆ ಹೋತ್, ಕಾಲಾಳ್‌ಗ ಸಂಕ ಜಾಗಟೆ
ಕೊಂಬು ಕಹಳೆನ ಬಾರ್ಸಿ ಸಬ್ದದೊಟ್ಟಿಗೆ ದೇವಲೋಕಕೆ
ನಾಕ್ ಕಡೆಂದ ಮುತ್ತಿಗೆ ಹಾಕಿತ್ ಬಲಿಚಕ್ರವರ್ತಿ ।
ಹೋ..........ಹೋ.........ಹೋ........ ಕೂ–ಕೂ–ಕೂ

ಏಳ್ ಇರ್ಲ್, ಎಂಟ್ ಹಗಲ್ ಬಲೀಂದ್ರ್ರಂಗೂ ದೇವತೆಗಳಿಗೂ
ನಡ್ದ ಯುದ್ದಲಿ ಬಾರಿ ದೊಡ್ಡ ಬಿಲ್ ಬಾಣ ಹಿಡ್ದ್
ದೇವತೆಗಳ ಸೋಲ್ಸಿ ರಾಜ್ಯಂದ ಹೊರೆಗೆ ಓಡ್ಸಿತ್‌ಗಡ
ಬೂಮಿಪುತ್ರ ಬಲೀಂದ್ರ.
ಹೋ.........ಹೋ...........ಹೋ.......... ಕೂ–ಕೂ–ಕೂ

ಸುತ್ತ ಮುತ್ತಂದ ಅರ್ವತ್ತ್ ಕೋಟಿ ರಾಕ್ಷಸರ್
ಮುತ್ತಿಗೆ ಹಾಕಿ ಓಡ್ಸ್‌ಕನ ಮುವತ್ತಮೂರ್ ಕೋಟಿ
ದೇವತೆಗ, ಸುತ್ತಿದ ಸೀರೆಲಿ, ಕಟ್ಟಿದ ಮುಂಡಾಸ್‌ಲಿ
ಮನೆ ಮಟ, ಬೆಳ್ಳಿ ಬಂಗಾರ, ದನಕರ್, ಹೆಣ್ಣ್ ಮಕ್ಕಳ
ಊರ್ ಕೇರಿನ ಬುಟ್ಟು ಗುತ್ತಿಲಿಓಡಿ ತಪ್ಸಿಕಂಡೊಗಡ ।
ದೇವೇಂದ್ರನ ರಾಜ್ಯನ ಸ್ವಾದೀನ ಮಾಡಿ ದರ್ಮ, ನ್ಯಾಯ, ನೀತಿಲಿ
ರಾಜ್ಯಬಾರ ಮಾಡ್ತಿತ್ತ್‌ಗಡ ಬಲಿ ಚಕ್ರವರ್ತಿ.।
ಹೋ.........ಹೋ...........ಹೋ.......... ಕೂ–ಕೂ–ಕೂ

ಬಲೀಂದ್ರ ಕೈಲಿ ಸೋತ್ ಓಡಿ ಹೋದ ದೇವತೆಗ
ಬಂದ ಕಷ್ಟನ, ನೆನ್ಸಿ ಏಳ್ ಇರ್ಲ್, ಎಂಟ್ ಹಗಲ್ ಅನ್ನ
ನೀರ್ ಬುಟ್ಟು, ಹೊಟ್ಟೆ ಬಾಯಿ ಕಟ್ಟಿ ಕಣ್ಣೀರ್ಲಿ ಕೈ ತೊಳ್ದ್
ತಲೆ ತಲೆ ಹೊಡ್ಕಂಡ್, ಎದೆಗೆ ಗುದ್ದಿಕಂಡ್, ಸ್ವಾಮಿ ನಾರಾಯಣ
ದೇವ್ರೆ ನಾವ್ಗೆ ಬಂದ ಆಪತ್ತಿನ ಪರಿಹಾರ ತೋರ್ಸಿಂತ
ಅಳ್ತಿದ್ದೊ ದೇವತೆಗ ।
ಹೋ.........ಹೋ...........ಹೋ.......... ಕೂ–ಕೂ–ಕೂ

ದೇವತೆಗ ಜೋರ್ಲಿ ಮರ್ಡುವ ಸಬ್ದ ಕೇಳಿ ಹಾಲಿನ
ಸಮುದ್ರಲಿ, ಸೇಸನಾಗನ ಮೇಲೆ ಮಲ್ಗಿದ್ದ

ಶ್ರೀ ಮನ್ನಾರಾಯಣದೇವ್ರ್ ದಿಡ್ಕಂತ ಎದ್ದ್ ಪಕ್ಷಿರಾಜ ಗರುಡ ಹಕ್ಕಿನ
ಮೇಲೆ ಕುದ್ದ್ ದೇವತೆಗಳ ವಿಚಾರ್ಸಿಕನ ।
ನ್ಯಾಯದರ್ಮಲಿ ರಾಜ್ಯಬಾರ ಮಾಡ್ತಿದ್ದ ಬಲೀಂದ್ರಂದ
ನೀವ್ಗೆ ಏನ್ ತೊಂದರೆ ಆತ್‌ಂತ ನಾಕ್ ಕೈ ನಾರಾಯಣ ದೇವ್ರ್
ಕೇಳ್ದೊಗಡ ದೇವತೆಗಳ ।
ಹೋ.........ಹೋ............ಹೋ........... ಕೂ–ಕೂ–ಕೂ

ಆಕಾಸಲಿ ಗರುಡನ ಮೇಲೆ ಕುದ್ದ್ ಹೇಳ್ದ ಮಾತ್ನ ಕೇಳಿ
ದೇವತೆಗ ನಾರಾಯಣ ದೇವ್ರ್ ಕಾಲಿಗೆ ಅಡ್ಡ ನೀಟ ಬಿದ್ದ್ ಅತ್ತ್‌ಕಂಡ್ ಹೇಳ್ವೆ.
ಮಹಾ ದೇವ್ರೇ, ನಮ್ಮ ಮಾತ್‌ನ ಕೇಳೊಕು, ಬಲೀಂದ್ರ ಈಗ
ತೊಂಬತ್ತೊಂಬತ್ತನೇ ಯಾಗ ಮಾಡ್ತಾವುಟ್ಟು ಇನ್ನೊಂದು ಯಾಗ ಪೂರ್ತಿ
ಮಾಡ್ರೆ ನನ್ನ ಇಂದ್ರನ ಪಟ್ಟ ಅಂವಂಗೆ ಹೊದ್ದೆ, ಏನಾರ್ ಮಾಡಿ
ನನ್ನ ಇಂದ್ರ ಪಟ್ಟನ ವೊಳ್ಸಿಕೊಡುಕುಂತ ದೇವೇಂದ್ರ ಸಿರಿನಾರಾಯಣ
ದೇವ್ರ್ ಕಾಲಿಗೆ ಅಡ್ಡ ಬೀತ್. ।
ಹೋ.........ಹೋ............ಹೋ........... ಕೂ–ಕೂ–ಕೂ

ನ್ಯಾಯ ರೀತಿಲಿ ರಾಜ್ಯಬಾರ ಮಾಡ್ತಿದ್ದ
ರಾಜ್ಯನ ಹಾಳ್ ಮಾಡ್ಕೆ ನಾವು 'ಕಲಿಯುಗ' ನ ಸೃಷ್ಠಿ ಮಾಡಿ ಕಳ್ಸಿದೊ
'ಕಲಿಯುಗ'ನ ಅನ್ಯಾಯ ಅತರ್ವಣ ನೋಡಿ ಬಲೀಂದ್ರ ಅಂವನ
ಕೈ ಕಾಲ್ ಕಟ್ಟಿ ಅಟ್ಟಲಿ ಹಾಕಿಟುಂತ ಕಣ್ಣೀರ್ ಒರ್ಸಿಕಂಡ್
ನಾರಾಯಣ ದೇವ್ರ ಕಾಲಿಗೆ ಅಡ್ಡ ಬೀತ್ ದೇವೇಂದ್ರ ।

ಹೋ.........ಹೋ............ಹೋ........... ಕೂ–ಕೂ–ಕೂ
ನಾವು ನಮ್ಮ ರಾಜ್ಯಲಿ ಇಲ್ಲದ ಸಮಯ ನೋಡಿ ಬಲೀಂದ್ರ
ಅರ್ರ್ವತ್ತ್ ಕೋಟಿ ರಾಕ್ಷಸರ್, ಎಪ್ಪತ್ತನಾಕ್ ಕೋಟಿ ಬೂತಗಳ ಕೂಡಿ ಹಾಕಿ
ನಮ್ಮ ಓಡ್ಸಿ, ಊರ್‌ಕೇರಿ ಸೂರೆ ಮಾಡ್ತ್ ಈಗ ಅಂವ ಸುಕ ಸಂತೋಸಲಿ
ರಾಜ್ಯ ಬಾರ ಮಾಡ್ತಾವುಟ್ಟುಂತ ಹೇಳ್ದೊಗಡ ದೇವತೆಗ
ಹೋ.........ಹೋ............ಹೋ........... ಕೂ–ಕೂ–ಕೂ

ಬಂದ ಕಷ್ಟನ ಅತ್ತ್‌ಕರ್ದ್ ಕಣ್ಣೀರ್ ಹಾಕಿ ನಾರಾಯಣ
ದೇವ್ರ ಕಾಲಿಗೆ ಅಡ್ಡನೀಟ ಬಿದ್ದ್, ತಲೆ ತಲೆ ಹೊಡ್ಕಂಡ್
ಬೊಬ್ಬೆ ಹೊಡೆಕನ, ದೇವತೆಗಳ ಹಕ್ಕಲೆ ಕರ್ದ್ ನಾಕ್ ಕೈ
ನಾರಾಯಣ ದೇವ್ರ್ ಹೇಳ್ದೊಗಡ ।
ಹೋ.........ಹೋ............ಹೋ........... ಕೂ–ಕೂ–ಕೂ

ಕೆಬಿ ಕೊಟ್ಟು ಕೇಳಿ ದೇವತೆಗಳೆ, ನಾ ನೀವ್ವಾಗಿ
ಬಾಲ ಬ್ರಹ್ಮಚಾರಿ ಯೇಸಲಿ ಬಲೀಂದ್ರನ ಯಾಗ ಸಾಲೆಗೆ
ಹೋಗಿ ಮೂರ್ ಮೆಟ್ಟ್ ಬೂಮಿ ದಾನ ಕೇಳಿ ಅಂವನ ರಾಜ್ಯಂದ
ಗಡಿಪಾರ್ ಮಾಡಿ ನಿಮ್ಮ ರಾಜ್ಯನ ನೀವ್ಗೆ ಕೊಡ್ಸಿನೆಂತ
ಸಮಾದಾನ ಮಾಡಿ ಗರುಡ ವಾಹನಲಿ ಕುದ್ದ್ ಆಕಾಸಲಿ ಹಾರಿ
ಹೋದೊ ನಾಕ್ ಕೈ ನಾರಾಯಣ ದೇವ್ರ್
ಹೋ.........ಹೋ............ಹೋ........... ಕೂ–ಕೂ–ಕೂ

# ಎರ್ಡನೆ ಸಂದಿ

ನಾಕ್ ಕೈ ನಾರಾಯಣ ದೇವ್ರ್ ಎಲ್ಲಿ ಹುಟ್ಟಿದೋ, ಎಲ್ಲಿ
ಬೇಳ್ದೊ, ಏನ್ ಮಾಡ್ದೊಂತ ಕೇಳ್ಕನ ........
ಜಂಬೂ ದೀಪಲಿ ಸಮುದ್ರ ನೀರ್ ಅಲ್ಲೋಲಕಲ್ಲೋಲಾತ್ ಎದ್ದ
ಕೆಸ್ರ್ ಸಾಂತ ಆತ್, ಬೂಮಿ ಗಟ್ಟಿ ಆತ್, ಸುದ್ದ ನೀರ್ ನಿತ್ತತ್, ಹಾಲ್
ಹೆಪ್ಪು ಗಟ್ಟಿತ್, ಯಾಗ ಸಾಲೆ, ಮುತ್ತಿನ ತಾವರೆ ಕೆರೆಲಿ, ಬೆಳಿ
ತಾವರೆ ಎಸ್ಲಲಿ ಮೂರ್ ಕುಸುಮಲಿ ಶ್ರೀ ನಾರಾಯಣ ದೇವ್ರ
ಜನ್ಮ ಆತ್‌ಂತ ಹೇಳ್ಕನ, ಕೈ ಕಾಲಿಗೆ ಬಸ್ಮ ಪೂಜಿಕಂಡ್,
ತುಂಡು ಪಂಚೆ ಸುತ್ತಿ ಕಂಡ್, ಕೈಲಿ ಕಮಂಡಲ ಹಿಡ್ದ್ ನಾರಾಯಣ
ದೇವ್ರು ಬಾಲ ಬ್ರಹ್ಮಚಾರಿ ಏಸಲಿ ಅವತಾರ ಮಾಡ್ದೊ ಗಡ ।
ಹೋ.........ಹೋ............ಹೋ........... ಕೂ–ಕೂ–ಕೂ

ಬ್ರಹ್ಮಚಾರಿ ಏಸದ ನಾರಾಯಣ ದೇವ್ರ್ ಬಲ್ದ
ಬುಜಲಿ ಚಿನ್ನದ ಸಂಕಮಾಲೆ, ಎಡ್ದ ಬುಜಲಿ
ಬೆಳ್ಳಿ ಸಂಕಮಾಲೆ, ಬಲ್ದ ಹೆಗ್‌ಲ್ಲಿ ಚಿನ್ನದ ಜನಿವಾರ ಎಡ್ದ
ಹೆಗ್‌ಲ್ಲಿ ಬೆಳ್ಳಿ ಜನಿವಾರ, ಬಲ್ದ ಕೈಲಿ ಚಿನ್ನದ ಸಿರಿಗಿಂಡಿ
ಎಡ್ದ ಕೈಲಿ ತೊಳ್ಸಿ ಮಾಲೆ ಹಿಡ್ದ್ ಹೊರ್ಟ್ಟೊ ಗಡ ಬಾಲ ಬ್ರಹ್ಮಚಾರಿ
ಹೋ.........ಹೋ............ಹೋ........... ಕೂ–ಕೂ–ಕೂ

ಮೂಡ ಬುಡ್‌ಕೆ ಮುಂದೆ ಎದ್ದ್ ಬ್ರಹ್ಮಾಚಾರಿ ಸುದ್ದಕೆ
ತಣ್ಣೀರ್ ಮಿೂದ್, ಸೊಂಟಕೆ ಬೆಳ್ಳಿ ನೇವಳ ಬಿಗ್ದ್, ತುಂಡು
ಮಡಿ ಪಂಚೆ ಸುತ್ತಿ, ಬಕ್ತಿಲಿ ಬಸ್ಮಹಾಕಿ ಮೈಗೆ ಗಂದ ಚಂದನ,
ಹಣೆಗೆ ಉದ್ದನಾಮ ಕಪ್ಪು ವರ್ಣದ ಸಾರಂಗ ಚರ್ಮ
ತಕಂತ್, ಜಪಕ್ಕೆ ಜಪಮಾಲೆ, ಬೆದ್ರ್‌ಕೋಲು ಊರಿಕಂಡ್,
ಬಿಸಿಲಿಗೆ ಪನೆಕೊಡೆ, ಕಾಲಿಗೆ ಕಡಾವು ಹಾಕಿ ಬೊಗ್ಗಿ ಬೂಮಿಗೆ
ಕೈ ಮುಗ್ದ್, ಮೂಡಕ್ಕೆ ಮುಕ ಮಾಡಿ, ಬಾಯಿಲಿ ಯಾವುದೋ

ಮಂತ್ರ ಹೇಳಿಕಂಡ್, ಸಣ್ಣ ಸಣ್ಣ ಹೆಜ್ಜೆಯಿಸಿ ಹೊರ್ರೊಗಡ
ಬಾಲ ಬ್ರಹ್ಮಚಾರಿ ದೇವ್ರ್.
ಹೋ.........ಹೋ............ಹೋ........... ಕೂ–ಕೂ–ಕೂ

ಸತ್ಯಲಿ ಬಿರ್ಸ ನೀತಿಲಿ ಮೇಲೆ, ದರ್ಮಲಿ ನಡೆವ
ಬಲೀಂದ್ರಂಗೆ ಪಡ್ವದ ಸಮುದ್ರ ಕರೆಂದ
ಗಟ್ಟದಬುಡದ ವರೆಗೆ ದೊಡ್ಡ ರಾಜ್ಯವುಟ್ಟು, ಹಳ್ಳದ ಕರೆಲಿ ಯಾಗ
ಸಾಲೆ, ಕರ್ಮನ ಕಳೆಕೆ ಹೋಮ, ದರ್ಮಕೆ ನೇಮ, ಅನ್ನದಾನ
ವಸ್ತ್ರದಾನ, ಗೋದಾನ, ಬೂಮಿದಾನ ಕೈ ಎತ್ತಿ ಕೊಡುತಾ ವುಟ್ಟು
ಬೂಮಿ ಪತ್ರ ಬಲೀಂದ್ರ ರಾಜ।
ಹೋ.........ಹೋ............ಹೋ........... ಕೂ–ಕೂ–ಕೂ

ಬಲೀಂದ್ರನ ಯಾಗ ಸಾಲೆಗೆ ಹೋಗಿ ಮೂರು ಮೆಟ್ಟ್ ಬೂಮಿ
ದಾನ ಕೇಳೊಕುಂತ ಮನ್ಸಿಲಿ ಗ್ರೇಸಿ, ಅಂವ ಕೊಟ್ಟರೆ ಒಂದು
ಮೆಟ್ಟ್ ಜಾಗೆಲಿ, ಮನೆ ಮಾರ್ ಕಟ್ತೊಸಕು, ಕೆರೆ ಬಾಮಿ ತೊಂಡ್ತೊಸಕು,
ಚಾಳೆ ಬಾಳೆ ನಡ್ತೊಸಕು, ಕೇನೆ ಗೆಣ್ಸ್ ಹಾಕೋಕು, ಕಂಬಳ ಕಟ್ಟಪುಣಿ
ಕಟ್ತೊಸಕು, ಗದ್ದೆ ಗೋರಿ ನಡ್ತೋಸಕು ಇನ್ನೊಂದು ಮೆಟ್ಟ್ ಜಾಗೆಲಿ
ದೇವ್ರಿಗೆ ಗುಡಿ, ಬೂತಗಳಿಗೆ ಮಾಡ, ಬ್ರಹ್ಮಂಗೆ ಸ್ತಾನ, ನಾಗಂಗೆ ಬನ
ಮತ್ತೊಂದು ಮೆಟ್ಟ್‌ಲಿ ಜಾತಿಲಿ ಜನಿವಾರದ ಜನ ನೀತಿಲಿ ನಡೆವಂಗೆ
ಮಾಡೊಕುಂತ ಯಾಗ ಸಾಲೆ ಕಡೆ ಬಂದೊ ಬಾಲ ಬ್ರಹ್ಮಚಾರಿ ಏಸದ
ನಾಕ್ಕೈ ನಾರಾಯಣ ದೇವ್ರ್
ಹೋ.........ಹೋ............ಹೋ........... ಕೂ–ಕೂ–ಕೂ

ಯಾಗ ಸಾಲೆ ಕಡೆಗೆ ಬಾತಾ  ಇರ್ವ್ ಬಾಲ ಬ್ರಹ್ಮಚಾರಿ ಮಾಣಿನ
ದೂರಂದಳೆ ನೋಡಿ ಹಕ್ಕಲೆ ಹೋಗಿ, ಯಾರ್, ನೀವ್? ಸಮುದ್ರ
ದೇವತೆನೋ?, ನಮ್ಮ ಉಂಟು ಮಾಡ್ದ ನಾರಾಯಣ ದೇವ್ರೋ?
ಹಣೆ ಬರಹ ಬರ್ದ ಬ್ರಹ್ಮನೋ? ಮೂರ್ ಕಣ್ಣ್‌ನ ಈಸರ
ದೇವ್ರೋಂತ? ಬೊಗ್ಗಿ ಬೊಗ್ಗಿ ನೋಡ್ತಿತ್ ಬಲೀಂದ್ರ ಚಕ್ರವರ್ತಿ।
ಹೋ.........ಹೋ............ಹೋ........... ಕೂ–ಕೂ–ಕೂ

ಹಕ್ಕಲೆ ಬಂದ ಬ್ರಹ್ಮಚಾರಿನ ಎತ್ತರದ ಮುಕ್ಕಾಲ್ ಮಣೆಲಿ
ಕುದ್ರಿಸಿ ಕಾಲಿಗೆ ಅಡ್ಡ ಬಿದ್ದ್ ಪಾದ ಪೂಜೆ ಮಾಡಿ ತೀರ್ತ ತಕಂತ್‌ಗಡ
ಬಲೀಂದ್ರ
ಹೋ.........ಹೋ............ಹೋ........... ಕೂ–ಕೂ–ಕೂ

ನಿಮ್ಮ ನೋಡಿ ನನ್ನ ಮನ್ಸಿಗೆ ಬಾರಿ ಸಂತೋಸ್ ಆತ್
ನನ್ನ ಸಂಸಾರದ ದುಕ್ಕ ದೂರ ಆತ್, ನಾ ಮಾಡ್ದ ಯಾಗ ಸಾರ್ತಕ
ಆತ್‌ಂತ ಹೇಳಿಕಂಡ್, ಎಡ್ದ್ ಬಲ್ದಿಗೆ ನಂದಾ ದೀಪ
ಇಸಿತ್. ಬಲೀಂದ್ರ ಕೇಳ್ದೆ. “ಸ್ವಾಮಿ, ನಿಮ್ಮ ಊರುಕೇರಿ ಯಾವುದು,
ಅವ್ವ ಅಪ್ಪ ಯಾರ್, ಏನ್ ಕಾರ್ಯಲಿ ಇತ್ತ ಬಂದರಿಂತ” ಮೇಲೆ
ಮೇಲೆ ಕಾಲಿಗೆ ಅಡ್ಡ ನೀಟ ಬೀತ್‌ಗಡ, ಬಲೀಂದ್ರ.।
ಹೋ.........ಹೋ............ಹೋ........... ಕೂ–ಕೂ–ಕೂ

ಬಲೀಂದ್ರನ ಮಾತ್ ಕೇಳಿ, ಬ್ರಹ್ಮಚಾರಿ ಹೇಳ್ದೆ, ಓ !
ಮೂರು ಲೋಕಲಿ ರಾಜ್ಯಬಾರ ಮಾಡ್ವ ಬಲೀಂದ್ರ, ಊರ್, ಕೇರಿ,
ದಿಕ್ಕ್, ದೆಸೆ ನಂಗ್ಯಾಕೆ, ಅಪ್ಪ ದೊಡ್ಡ ಸನ್ನೇಸಿ ನೀನೇ
ನನ್ನ ಯಜಮಾನ ಆಗಿರ್ಕನ ನಂಗೆ ಯಾವ ಕುಂದೂ ಕೊರ್ತೆ
ಇಲ್ಲೆಂತ ಹೇಳ್ತ್ ಗಡ ಬ್ರಹ್ಮಚಾರಿ.।
ಹೋ...........ಹೋ..........ಹೋ......... ಕೂ–ಕೂ–ಕೂ

ಬಲೀಂದ್ರ, ನೀ ಪುಣ್ಯಕೆ ಹೋಮ, ದರ್ಮಕೆ ನೇಮ
ದರ್ಮಂದ ಹೆಚ್ಚಿ ದಾನ ಮಾಡ್ವ ನಿನ್ನಕ್ಕಲೆ ದಾನ ಕೇಳಿಕೆ ಹುಡ್ಕಿ ನಾ
ಬಂದಳೆಂತ ಹೇಳಿ
ಅನ್ನದಾನ, ವಸ್ತ್ರದಾನ, ಗೋದಾನ, ಚಿನ್ನ ಬೆಳ್ಳಿ ದಾನಗಳ
ಕೊಟ್ರೆ ಸಾಸ್ವತ ಅಲ್ಲ. ಅನ್ನ ಕೊಟ್ಟರೆ ತಿಂದುಂಡು ಮುಗೆದು,
ವಸ್ತ್ರದಾನ ಕೊಟ್ಟರೆ ಉಟ್ಟು ಹರ್ದ್ ಹಾಳಾದು, ಗೋದಾನ ಕೊಟ್ಟರೆ ಹೆಬ್ಬುಲಿ
ತಿಂದ್ ಹಾಕುದು, ಕನ್ಯಾದಾನ ಕೊಟ್ಟರೆ ಕಳ್ಳಕಾಕರ್ ಕದ್ದ್ ತಕಂಡ್‌ಹೋವೊ
ಬಲೀಂದ್ರ ! ನಿಂಗಾರೆ ಸಮುದ್ರ ಕರೆಂದ, ಗಟ್ಟದ ಬುಡಕ್ಕೆ
ಮುಟ್ಟ ದೊಡ್ಡ ರಾಜ್ಯವುಟ್ಟು ನಿನ್ನ ರಾಜ್ಯಲಿ ನಂಗೆ ಬರೀ ಮೂರ್
ಮೆಟ್ಟ್ ಜಾಗೆ ದಾನ ಕೊಟ್ಟರೆ ಸಾಕಂತ್ ಹೇಳಿ. ಬಲೀಂದ್ರನ

ಮೋರೆನೇ ನೋಡ್ತಾ ನಿತ್ತತ್‌ಗಡ ಬಾಲ ಬ್ರಹ್ಮಚಾರಿ
ಹೋ.........ಹೋ............ಹೋ........... ಕೂ–ಕೂ–ಕೂ

ಅಯ್ಯೋ ದೇವ್ರೇ ಓ, ಮೂರ್ ಮೆಟ್ ಜಾಗೆಲಿ ಏನ್
ಮಾಡಿಕೆ ಸಾದ್ಯ ಆದುಂತ ಕೇಳ್ಕನ, ಬ್ರಹ್ಮಚಾರಿ ಹೇಳ್ದೆ, ಒಂದು
ಮೆಟ್ಟಲಿ ಮನೆ ಕಟ್ಸಿನೆ, ಬಾಮಿ ಕೆರೆ ತೊಂಡ್ಸಿನೆ, ಚಾಳೆ ಬಾಳೆ
ನಡ್ಸಿನೆ, ಕೇನೆ ಗೆಣ್ಸ್ ಹಾಕ್ಸಿನೆ, ಗದ್ದೆ ಕಡ್ಸಿ ಕಂಬಳ ಗೋರಿ ನಡ್ಸುವೆ,
ಪೂಕಳೆ ಗದ್ದೆಲಿ, ಕಂಬಳ ನಡ್ಸಿನೆ, ಇನ್ನೊಂದು
ಮೆಟ್ಟ್ ನೆಲಲಿ ದೇವ್ರಿಗೆ ದೇವಸ್ತಾನ, ಬೂತಗಳಿಗೆ ಮಾಡ
ಬ್ರಹ್ಮಂಗೆ ಸ್ತಾನ, ನಾಗಂಗೆ ಬನ, ಮಾಡಿ ಜಾತ್ರೆ ನಡ್ಸಿನೆ,
ಮತ್ತೊಂದು ಮೆಟ್ಟ್ ಜಾಗೆಲಿ ಹಾರಂವುಕೆ ನೆಲೆ, ಮಾಡಿ ದಾನ ದರ್ಮ
ಮಾಡ್ಸಿನೆ, ದಾನ ಕೊಡಿಕೆ ಮನ್ಸಿದ್ದರೆ ಸಂತೋಸಲಿ ಕೊಡು, ಇಲ್ಲೆಂರಾತೆ
ಬಂದ ದಾರಿಲೇ ಹಿಂದೆ ಹೋನೆಂತ ಹೊರ್ಡಿಕೆ ತಯಾರ್ ಮಾಡ್ತ್ ಬಾಲ
ಬ್ರಹ್ಮಚಾರಿ...
ಹೋ.........ಹೋ............ಹೋ........... ಕೂ–ಕೂ–ಕೂ

ಬ್ರಹ್ಮಚಾರಿನ ಮಾತ್ ಕೇಳಿ ಅಯ್ಯೋ ದೇವ್ರೇ
ಯಾಕೆ ಇಂತ ಸಿಟ್ಟ್‌ನ ಮಾತ್, ಬೇಕಾರೆ ಮೂರ್ ರಾಜ್ಯ ಕೊಡುವೆ
ಹಟ್ಟಿ ತುಂಬ ದನಕರ್, ಮನೆತುಂಬಾ ಚಿನ್ನ ಬೆಳ್ಳಿ, ಆನೆ ಕುದ್ರೆ
ಮುತ್ತು ಮಾಣಿಕ್ಯ, ಪಟ್ಟೆ ಸೀರೆ, ಬೂರಿ ಬೋಜನ, ಜಪಕ್ಕೆ ಗುಡಿ
ಮಿಂಯಕೆ ಕೆರೆ, ಅಡಿಗೆ ಮಾಡ್ಕೆ ಒಳ್ಳೆ ಗೂಡೆನ ಮದ್ವೆ ಮಾಡಿ ಕೊಡ್ವೆಂತ
ಕೈ ಮುಗ್ದ್ ಹೇಳ್ತ್ ಬಲೀಂದ್ರ. ಇಂದ್ ಅರಮನೆಲಿ ಒಳ್ದ್ ವಿಸ್ರಾಂತಿ
ತಕಂಡ್ ನಾಳೆ ಮೂಡಬುಡ್ಕೆ ಮುಂದೆ ಬನ್ನಿಂತ ಬೂಮಿ ಪುತ್ರ
ಬಲೀಂದ್ರ ಹೇಳ್ತ್ ಗಡ.
ಹೋ.........ಹೋ............ಹೋ........... ಕೂ–ಕೂ–ಕೂ

ಬಲೀಂದನ್ರ ಅಣ್ಣ, ದಾನವ ಗುರು ಸುಕ್ರಾಚಾರ್ಯರಿಗೆ
ಸಂಸಯ ಬಂದ್, ರಾಜನ ಅರಮನೆ ಕೋಣೆಗೆ ಕರ್ದ್ ಗುಟ್ಟಲಿ
ವಿಸಯ ತಿಳ್ಸಿದೊ ಗಡ.
ಈಗ ಬ್ರಹ್ಮಚಾರಿ ಏಸಲಿ ಬಂದ ನಾರಾಯಣ

ದೇವ್ರ್ ನಿಂಗೆ ಮೋಸ ಮಾಡಿ ನಿನ್ನ ಇಲ್ಲಿಂದ ಓಡ್ಸಿ, ರಾಜ್ಯನ
ದೇವತೆಗಳಿಗೆ ಕೋಡ್ಕೆ ಮಾಡ್ದ್ ಉಪಾಯಂತ ಹೇಳಿ, ಬ್ರಹ್ಮಚಾರಿ
ಕೇಳ್ದಷ್ಟ್ ಆನೆ ಕುದ್ರೆ ಬೆಳ್ಳಿ ಬಂಗಾರ ಕೋಟ್ಟು ಕಳ್ಸ್ ಯಾವ
ಮಾತ್ರಕ್ಕೂ ಬೂಮಿದಾನ ಕೋಡ್‌ಬಡ, ಕೋಡ್‌ಬಡಂತಾ
ಬಗೆತಾರಲಿ ಮೂರು ಸರ್ತಿ ಹೇಳ್ದೊ ಸುಕ್ರಚಾರ್ಯರ್‌।
ಹೋ........ಹೋ...........ಹೋ.......... ಕೂ–ಕೂ–ಕೂ

ಆ ಹೊತ್ತಿಗೆ ಸುಕ್ರಾಚಾರ್ಯರ ಮಾತ್ ಕೇಳಿ, ಬಲೀಂದ್ರ
ಹೇಳ್ದೆ, "ಅಯ್ಯೋ ಅಣ್ಣಾ, ಲಕ್ಷ್ಮಿದೇವಿನ ಯಜಮಾನ
ಶ್ರೀ ಮನ್ನಾರಾಯಣನ ಕೈ ಅಡಿಲಿ, ನನ್ನ ಕೈ ಮೇಲೆ
ಇರ್‌ಕನ, ಕೊಟ್ಟ ಮಾತಿಗೆ ತಪ್ಪಿ ನಡ್ದ್ ನರ್ಕಕೆ ಹೋಕೆ ನಾ ತಯಾರಿಲ್ಲೆ
ಬಂದಂವ, ನಾಕ್ ಕೈ ನಾರಾಯಣ ದೇವ್ರಾಗಲೀ, ನಾಕ್ ತಲೆ
ಬ್ರಹ್ಮನೇ ಆಗಲಿ, ಮುಕ್ಕಣ್ಣ ಈಸ್ವರ ದೇವ್ರಾಗಲಿ, ಸಮುದ್ರ
ಒಣ್ಗಿ ಬರಡಾಗಲಿ, ಸೂರ್ಯನ ಬಿಸಿ ತಂಣಂಗಾಗಲಿ, ರಾತ್ರೆ
ಹಗ್‌ಲಾಗಲಿ, ಹಗಲ್ ಇರ್ಲಾಗಲಿ, ನಾ ಕೇಳಿಕ್ಕಿಲೆಂತ
ಹೇಳಿ ಬ್ರಹ್ಮಚಾರಿನ ಕರೆಕೆ ದೂತರ ಕಳ್ಸಿತ್ ಬಲೀಂದ್ರ ।
ಹೋ........ಹೋ...........ಹೋ.......... ಕೂ–ಕೂ–ಕೂ

ಬಂದ ದೂತನ ನೋಡಿ ಬಾಲ ಬ್ರಹ್ಮಚಾರಿ ತಲೆ ಮೈ
ಜಳಕ ಮಾಡಿ, ಹಣೆಗೆ ಬಸ್ಮ ಬಳ್ಕಂಡ, ಮೈಗೆ ಗಂಧ ಪೂಜಿಕಂಡ್
ಯಾಗ ಸಾಲೆಗೆ ಬಂದ್ ಮುಟ್ಟಿತ್ ।
ಹೋ........ಹೋ...........ಹೋ.......... ಕೂ–ಕೂ–ಕೂ

ಬ್ರಹ್ಮಚಾರಿನ ಮಾಣಿಕದ ಮಣೆಲಿ ಕುದ್ರಿಸಿ ಪಾದ ಪೂಜೆ
ಮಾಡಿ, ಕೈ ಹಿಡ್ದ್ ಹೆಣ್ಣ್‌ನ ಕರ್ಕಂಡ್ ಚಿನ್ನದ ಗಿಂಡಿಲಿ
ಪಿಂಗಾರ, ತೊಳ್ಸಿ ಕೊಡಿ ಯಿಸಿ ಬೂಮಿ ದಾನ ಎರ್ದದೆ
ಬಲಿಂದ್ರ।
ಹೋ........ಹೋ...........ಹೋ.......... ಕೂ–ಕೂ–ಕೂ

ಗಿಂಡಿನ ಬೊಗ್ಗಿಸಿರೂ ಬೊಗ್ಗಿಸಿರೂ ನೀರ್ ಬೀಳ್ದುಲ್ಲೆ, ಇದರ
ನೋಡಿ ಬ್ರಹ್ಮಚಾರಿ ದರ್ಬೆನ ತೆಗ್ದ್ ಗಿಂಡಿನ ಕೊಂಬುನೊಳಗೆ
ಹಾಕಿ ಕುತ್ತಿತ್ ಗಡ, ಆ ಹೊತ್ತಿಗೆ ನೀರ್ನ ಬದ್ಲ್ ನೆತ್ತ್‌ರ್
ಅರೆಕೆ ಸುರು ಆತ್. ಇದೇನ್ ಕಲಿಯುಗಂತ ಕಂಗಾಲಾತ್
ಬಲೀಂದ್ರ. ಆ ಸಮಯಲಿ ಅಣ್ಣ ಸುಕ್ರಾಚಾರ್ಯ ಒಂದು
ಕಣ್ಣಿನ ಕೈಲಿ ಒತ್ತಿ ಹಿಡ್ಕಂಡ್ ಗಿಂಡಿನಿಂದ ಹೊರಗೆ ಬಂದವೆ.
ಆ ದಿನಂದ ಅವ್ಕೆ ಒಕ್ಕಣ್ಣ್ ಸುಕ್ರಚಾರ್ಯಂತ ಹೆಸ್ರ್ ಬಾತ್
ಹಾಂಗೆ ಬೂಮಿ ಪುತ್ರ ಬಲೀಂದ್ರ ಚಿನ್ನದ ಕೊಂಬಿನ
ಗಿಂಡಿಲಿ ಬೂಮಿದಾನ ಎರ್ದ್ ಕೊಟ್ಟತ್ ಗಡ ।
ಹೋ.........ಹೋ............ಹೋ........... ಕೂ–ಕೂ–ಕೂ

# ಮೂರ್ನೆ ಸಂದಿ

ಮೂರು ಲೋಕನ ಆಳ್ವ ಬೂಮಿಪುತ್ರ ಬಲೀಂದ್ರ
ಚಿನ್ನದ ಗಿಂಡಿಲಿ ಬೂಮಿದಾನ ಎರ್ದ್ ನೀರ್ ಬೂಮಿಗೆ ಬಿದ್ದಾಂಗೆ
ಬಾಲ ಬ್ರಹ್ಮಚಾರಿ ಮಾಯ ಆಗಿ ತ್ರಿವಿಕ್ರಮ ಆಗಿ ಬೆಳ್ದ್
ನಿತ್ತತ್ ಗಡ. ಅವನ ತಲೆ ಸ್ವರ್ಗ ಲೋಕಕೆ ತಾಂಗಿದೆ.
ಬಲ್ದ ಕೈ ಮೂಡನ ಸಮುದ್ರ ದಾಟಿದೆ, ಎಡ್ದ ಕೈ ಪಡ್ವದ ಸಮುದ್ರ
ಮುಟ್ಟಿದೆ, ಪಾದ ಸಮುದ್ರಗಳ ದಾಟಿ ಬೆಳ್ದಾಕನ ಅಚ್ಚರಿಲಿ
ಮೇಗಡೆ ಕಾಗಡೆ ನೋಡ್ದೆ ಬಲೀಂದ್ರ
ಹೋ.........ಹೋ............ಹೋ........... ಕೂ–ಕೂ–ಕೂ

ತ್ರಿವಿಕ್ರಮ ಶ್ರೀ ನಾರಾಯಣ ದೇವ್ರ್ ಒಂದ್ ಮೆಟ್ಟ್‌ಲಿ
ಬೂಮಿನ ಅಳ್ತ್‌ಗಡ, ಎರ್ಡನೆ ಮೆಟ್ಟಿಗೆ ಸ್ವರ್ಗನ
ಅಳ್ತ್‌ಗಡ ಅಂವನ ಮೈ ಮೇಲೆ ಬೂಮಿ, ಆಕಾಸ, ಪಾತಾಳ
ಸ್ವರ್ಗ ಪ್ರಾಣಿ ಪಕ್ಷಿಗ , ದೇವತೆ ರಾಕ್ಷಸರ್, ಸೂರ್ಯ
ಚಂದ್ರ ನಕ್ಷತ್ರ, ಗುಡ್ಡೆ ಪರ್ವತ, ಕಂಡದೆಗಡ
ಆ ಸಕ್ತಿನ ನೋಡ್ದವು ಬೋದ ತಪ್ಪಿ ನೆಲಕ್ಕೆ ಬಿದ್ದವೆ ಗಡ
ಹೋ.........ಹೋ............ಹೋ........... ಕೂ–ಕೂ–ಕೂ

ಎರ್ಡ್ ಮೆಟ್ಟಿಲಿ ಬೂಮಿ ಸ್ವರ್ಗನ ಅಳ್ದ
ತ್ರಿವಿಕ್ರಮ, ಮಾಯ ಆಗಿ ನಾಕ್ ಕೈ ನಾರಾಯಣ ದೇವ್ರ್
ಎದ್ರಿಗೆ ನಿತ್ತೊಳಗಡ । ಬಲೀಂದ್ರ, ನಿನ್ನ ಹಿರಿಯೊವು
ಕೊಟ್ಟ ಮಾತಿಗೆ ತಪ್ಪಿ ನಡ್ತಿಲ್ಲೆ. ನಂಬಿಕೆ ವಿಶ್ವಾಸಕ್ಕೆ
ಪ್ರಾಣ ಕೊಟ್ಟೊಳೊ. ಅವರ ಕುಲಲಿ ಹುಟ್ಟಿದ ನೀ ಅವರ
ಹೆಸ್ರ್‌ಗೆ ಕುಂದು ತರ್ಬಡಂತ ಹೇಳಿ ಕೊಟ್ಟ ಮಾತಿಗೆ
ತಪ್ಪಿದ ಬಲೀಂದ್ರನ ನಾಗ ಬೆತ್ತಲಿ ಕೈ ಕಾಲು ಕಟ್ಟಿ ಹಾಕ್ಕೆ
ಗರುಡಂಗೆ ಆದೇಸ ಕೊಟ್ಟೊ ನಾರಾಯಣ ದೇವ್ರ್.
ಹೋ.........ಹೋ............ಹೋ........... ಕೂ–ಕೂ–ಕೂ

ಗರುಡ ಬಲೀಂದ್ರನ ಕೈ ಕಾಲ್ ಕಟ್ಟಿ
ಹಾಕಿದಂಗೆ ನೀ ಹೇಳ್ದ್ ಮಾತ್ ಎಲ್ಲಿ ಹೋತ್ಂತ ಮೊಗ್ಗಿ ಮೊಗ್ಗಿ
ಕೇಳ್ದೊ ನಾರಾಯಣ ದೇವ್ರ್
ಹೋ........ಹೋ...........ಹೋ.......... ಕೂ–ಕೂ–ಕೂ

ನಾರಾಯಣ ದೇವ್ರ್ ಹಂಗ್ಸುವ ಮಾತ್ ಕೇಳಿ ಬಲೀಂದ್ರ ಹೇಳ್ದೆ
"ಹೇಳ್ದ ಮಾತಿಗೆ ತಪ್ಪಂವ ನಾ ಅಲ್ಲ. ಸತ್ಯಕೆ ನಾ ಎದೆ ಮೇಲೆ
ದಾರಿ ಬುಟ್ಟನೆಂತ ಹೇಳಿ ಬೂಮಿ ಮೇಲೆ ಅಂಗಾತ
ಮಲ್ಗಿ ಇನ್ನೊಂದು ಮೆಟ್ಟ್ ನನ್ನ ತಲೆ ಮೇಲೆ ಇಸಿಂತ
ಬೂಮಿ ಪುತ್ರ ಹೇಳ್ತ್‌ಗಡ.
ಹೋ........ಹೋ...........ಹೋ.......... ಕೂ–ಕೂ–ಕೂ

ಒಪ್ಪಿದಮಾತ್, ಕೊಟ್ಟದಾನ ಇಲ್ಲೆಂತ. ಹೇಳ್ವ ರಾಜನ
ಊರ್ಂದ ಗಡಿಪಾರ್ ಮಾಡೊಕುಂತ, ಕಟ್ಟಿದ ಬಳ್ಳಿನ ಬಿಚ್ಚಿ,
ಸುಳಿಕಡಲ್ ಪಾಮಜಿ ಕಡಲ್, ನೆತ್ತರ್ ಕಡಲ್, ನೀರ್ ಕಡಲ್
ಹಾಲ್ ಕಡಲ್, ದಾಟಿ ಅತ್ತ ಇರ್ವ ಬಾರಿ ಸಂಪತ್ತ್ ತುಂಬಿದ ಪಾತಾಳ
ಲೋಕಲಿ
ರಾಜ ಇಲ್ಲದ ಊರಿಗೆ ನೀ ಹೋಗಿ ರಾಜ್ಯ ಬಾರ ಮಾಡ್ಂತ
ನಾಕ್ ಕೈ ನಾರಾಯಣ ದೇವ್ರ್ ಬಲೀಂದ್ರಂಗೆ ಹೆಳ್ದೊಗಡ ।
ಹೋ........ಹೋ...........ಹೋ.......... ಕೂ–ಕೂ–ಕೂ

ಓ ನಾರಾಯಣ ದೇವ್ರೆ ನನ್ನ ನೀವು ಮೋಸಲಿ ಕಟ್ಟಿ ಹಾಕಿ
ಮಾಡ್ದ ಕೆಲ್ಸ ಗೊತ್ತತ್ ನಿಮ್ಮ ಅಪ್ಪಣೆನಾಂಗೆ ನೀವು ಹೇಳ್ದ
ಊರಿಲಿ ರಾಜ್ಯ ಬಾರ ಮಾಡ್ನೆ ನನ್ನ ಬಿನ್ನಹ ಒಂದು
ನಡ್ಸಿಕೊಡಿ, ನೀವು ಅಲ್ಲಿಗೆ ಬಂದ್ ರಾಜ್ಯದ ಗಡಿ ರಕ್ಷಣೆ ಮಾಡಿ
ಕೊಡಕೂಂತ ಬಲೀಂದ್ರ ನಾರಾಯಣ ದೇವ್ರ್ ಕಾಲಿಗೆ ಬಿದ್ದ್
ಬೇಡಿಕಂಡತ್ ಗಡ.
ಹೋ........ಹೋ...........ಹೋ.......... ಕೂ–ಕೂ–ಕೂ

ಕಾಲಿಗೆ ಬಿದ್ದ ಬಲೀಂದ್ರನ ಕೈ ಹಿಡ್ದ್ ಎದ್ರ್ಸಿ
ತಬ್ಬಿ ಬೆನ್ನ್ ತಟ್ಟಿ, ನಿನ್ನ ರಾಜ್ಯದ ಬಾಗ್ಯನ ರಕ್ಷಣೆ ಮಾಡಿ, ಕಷ್ಟ
ಕಾಲಲಿ ನಿಂಗೆ ಸಾಯ ಮಾಡ್ನೆ, ನೀ ಇರ್ವಷ್ಟ್ ದಿನ
ನಿನ್ನ ರಾಜ್ಯ ಬಾರ ನಡ್ಸಂತ ಕೈ ಹಿಡ್ದ್ ಬಾಸೆ ಕೊಟ್ಟೊ ಗಡ
ನಾರಾಯಣ ದೇವ್ರ್
ಹೋ........ಹೋ...........ಹೋ.......... ಕೂ–ಕೂ–ಕೂ

ಆ ಸಮಯಲಿ ಬಲೀಂದ್ರ ಹೇಳ್ದೆ, “ ಓ, ನಾಕ್ ಕೈ
ನಾರಾಯಣ ದೇವ್ರೆ ನಾ ನಡ್ಸಿದ ದರ್ಮಕೆ ಹೋಮ, ಪುಣ್ಯಕೆ
ನೇಮ, ಇವುಕ್ಕೆಲ್ಲ ಓಕುಳಿ ಮಾಡದೆ ಹೋದರೆ ನಾ ನರ್ಕಕೆ
ಹೋಕ್ಕಾವುದು. ಹೋಮ ನೇಮಕ್ಕೆ ಓಕುಳಿ ಮಾಡ್ಸಿ
ನಂಗೆ ವೀಳ್ಯ ಕೋಟ್ಟು ಆಸೀರ್ವಾದ ಮಾಡೊಕುಂತ ಕೆಳ್ಕನ
ಬಲೀಂದ್ರನ ಮಾತಿಗೆ ಒಪ್ಪಿ ಅಂವಂಗೆ ವೀಳ್ಯ ಕೊಟ್ಟು
ಕಳ್ಸಿದೊ ನಾರಾಯದೇವ್ರ್।
ಹೋ........ಹೋ...........ಹೋ.......... ಕೂ–ಕೂ–ಕೂ

ಓಕುಳಿ ಮಿಾದ್ ಅರ್ಕಿನ ದೋಣಿಲಿ ಕುದ್ರಿಸಿ, ಹೊಡಿ ಅವಲಕ್ಕಿ
ಗೋಟುಕಾಯಿ ಕೋಟ್ಟು ಕುತ್ತಿಗೆಗೆ ಹೂವಿನ ಮಾಲೆ ಹಾಕಿ , ವೀಳ್ಯ
ಕೊಟ್ಟು ಕಳ್ಸಕನಾ, ದುಕ್ಕಲಿ ಮತ್ತೆ ಮತ್ತೆ ಹಿಂದೆ ತಿರ್ಗಿ ತಿರ್ಗಿ
ನೋಡಿಕಂಡ್ ಹೇಳ್ದೆ ಬಲಿಚಕ್ರವರ್ತಿ ।
ಹೋ........ಹೋ...........ಹೋ.......... ಕೂ–ಕೂ–ಕೂ

ಅಯ್ಯೋ ನಮ್ಮ ಉಂಟ್ ಮಾಡ್ದ ದೇವ್ರೆ, ನನ್ನ ರಾಜ್ಯ , ಆನೆ
ಕುದ್ರೆ , ಬೆಳೆ ಪೈರ್, ಚಿನ್ನ ಬೆಳ್ಳಿ, ಜನ ಜಾನ್ವರ್‌ಗಳ ಇನ್ನ್ ಯಾಗ
ನಾ ನೋಡ್ದುಂತ ಕಣ್ಣೀರ್ ಹಾಕಿಕಂಡ್ ಅಲ್ಲಿದ್ದ ಪ್ರಜೆಗಳ ನೋಡಿ
ತಲೆಕಂತ ಹಾಕಿ ಅಲ್ಲೇ ನಿತ್ತ್ ನೋಡ್ತಿತ್ತ್ ಬಲೀಂದ್ರ ರಾಜ.
ಹೋ........ಹೋ...........ಹೋ.......... ಕೂ–ಕೂ–ಕೂ

ಬಲೀಂದ್ರನ ದುಕ್ಕದ ಮಾತ್ ಕೇಳಿ ನಾರಾಯಣ ದೇವ್ರ್
ಹೇಳ್ವೆ “ಓ ಬಲೀಂದ್ರ, ನಿನ್ನ ರಾಜ್ಯದ ಸುಕ ದುಕ್ಕ ನೋಡಿಕೆ

ಕಾಲಕಾಲಕೆ ಆಟಿ ಅಮಾಸೆ ದಿನ ದೂತರ ಕಳ್ಸಿ ತಿಳ್ಕ, ಸೋಣ ಸಂಕ್ರಾಂತಿಗೆ
ನಿನ್ನ ಅವ್ವನ ಕಳ್ಸಿಕೊಡು, ಬೆಣ್ತಿಂಗ ಅಮಾಸೆಗೆ ಆರ್ ದಿನ ಬಲಿ
ಮೂರ್ ದಿನ ಪೊಲಿ, ದೀಪಾವಳಿ ಹಬ್ಬಕೆ ನೀ ಬೂಮಿಗೆ ಬಂದ್
ರಾಜ್ಯದ ಸುಕ ಸಂಪತ್ತ್‌ನ ನೋಡಿ ಸಂತೋಸ ಪಡ್ಂತ ನಾರಾಯಣ
ದೇವ್ರ್ ಆಸೀರ್ವಾದ ಮಾಡ್ದೊ ಗಡ ದ್ವಾಪರಲಿ ।
ಹೋ........ಹೋ...........ಹೋ.......... ಕೂ–ಕೂ–ಕೂ

ಈ ರಾಜ್ಯಲಿರುವ ಎಲ್ಲಾ ಬ್ರಾಂಬ್ರು, ಜೋಗಿ, ಜಂಗಮರ್
ಮಠದ ಸನ್ನೇಸಿಗ, ತುಂಡರಸುಗ, ಗುತ್ತಿನ ಮನೆವು
ಬೂಡ್ ಸ್ತಾನದೊವು, ಗದ್ದೆ ಬೇಸಾಯದೇವು, ಬಲ್ಲಾಳ್‌ಗ
ಸ್ತಾನ ಮಾನದ ಮುಖ್ಯಸ್ತರ್, ಒಕ್ಲ್‌ನವು,
ಸೆಟ್ಟಿ ಸಾವುಕಾರ್ಗ, ಗಟ್ಟದ ಬುಡಂದ ಸಮುದ್ರ ಕರೆವರೆಗೆ
ಇರ್ವ್ ಮೊನ್ ಮುಗ್ಗರ್, ಬಿಲ್ಲವ ಕುಲದವು, ಎಲ್ಲಾ
ಕೆಬಿಕೊಟ್ಟು ಕೇಳಿಂತ ನಾರಾಯಣ ದೇವ್ರ್ ಹೇಳ್ದೊ ಗಡ ।
ಹೋ........ಹೋ...........ಹೋ.......... ಕೂ–ಕೂ–ಕೂ

ಕಾಲಕಾಲಕೆ, ಆಟಿ ಅಮಾಸೆ ಸೋಣ ಸಂಕ್ರಾಂತಿ
ಬೆಣ್ತಿಂಗಲಿ ಬಾವ ದೀಪಾವಳಿ ಹಬ್ಬದ ದಿನ ಎಲ್ಲವೂ
ಬತ್ತ, ಬೆಳೆ, ದನ ಕರ್, ನೊಗ ನೇಗ್ಲ್, ಕೊಟ್ಟ್ ಪಿಕ್ಕಾಸ್
ತಡ್ಪೆ ಕುಕ್ಕೆ, ಬೆಳ್ಳಿ ಬಂಗಾರ, ಹೂ ಪಿಂಗಾರಲಿ, ಸಿಂಗಾರ ಮಾಡಿ
ದೂಪ ದೀಪದ ಆರತಿ ಮಾಡಿ ಮಕ್ಕಮರಿಗಳ
ಕೂಡಿಕಂಡ್ ಪೂಜೆ ಮಾಡೊಕು, ಕಟ್ಟ ಪುಣಿಲಿ ಪೂಜೆ
ಗದ್ದೆಲಿ ದೀಪ, ಮನೆ ಬಾಗ್ಲ್‌ಲಿ ಬೊಳ್ಕ್‌ಮರ ಹಾಕಿ, ಸ್ತಾನಲಿ
ದೀಪಾವಳಿ ಹಬ್ಬ, ಮನೆಮನೆಲಿ, ಆರ್‌ದಿನ ಬಲಿ, ಮೂರ್
ದಿನ ಪೊಲಿ ಕರ್ದ್ , ಬಲೀಂದ್ರನ ಪೂಜೆ ಮಾಡೊಕುಂತ ನಾಕ್ ಕೈ
ನಾರಾಯಣ ದೇವ್ರ್ ಊರಿಗೆ ಕಟ್ಟಪ್ಪಣೆ ಮಾಡ್ದೊ ಗಡ
ಹೋ........ಹೋ...........ಹೋ.......... ಕೂ–ಕೂ–ಕೂ

ಸಿರಿ ನಾರಯಣ ದೇವ್ರ್ ಬಲೀಂದ್ರಂಗೆ ಹೇಳ್ದೊ
ಓ! ಬೂಮಿ ಪುತ್ರ ಮನ್ಸಿಲಿ ಬೇಜಾರ್ ಮಾಡ್ಬಡ, ನೀ

ಕರಿಕಲ್‌ಕಾಯಕನ, ಬೊಳ್ಗಲ್ ಹೂ ಹೋಕನ, ಉಪ್ಪು
ಕರ್ಪೂರ ಆಕನ, ಅಂಗಳದ ನೆಲ ಪಾರೆಕಲ್ಲ್ ಆಕನ ಉದ್ದು
ಮದ್ದಳೆ ಆಕನ, ಗೊಡ್ಡಮ್ಮೆ ಕೋಣ ಆಕನ , ಎತ್ತ್ ಕರ್ ಹಾಕ್‌ನ
ತುಂಬೆ ದೈ ಬುಡಲಿ ಕೂಟ ಕೂಡ್ಕನ , ನೆಕ್ಕಿ ದೈ ಬುಡಲಿ ಆಟ
ಆಡ್ಕನ, ಮಂಜಳ ಹಕ್ಕಿಗೆ ಬೆಳಿ ಬಣ್ಣ ಬಾಕನ, ನೀ ಇಲ್ಲಿಗೆ
ಬಂದ್ ರಾಜ್ಯಬಾರ ಮಾಡಿ ಸಂತೋಷಲಿ ಇರ್‌ಂತ ಅಪ್ಪಣೆ
ಆರ್ಸಿವಾದ ಮಾಡಿ ಬಲೀಂದ್ರನ ಕಳ್ಸಿದೊ ಗಡ, ನಾಕ್ ಕೈ
ನಾರಾಯಣ ದೇವ್ರ್ ಪಾತಾಳ ಲೋಕಕೆ.

ಸಿರಿನಾರಾಯಣ ದೇವ್ರ ಕೈಯಿಂದ ವೀಳ್ಯ ತಕಂಡ್
ಕಾಲಿಗೆ ಅಡ್ಡ ಬಿದ್ದ್ ಹೊರ್ಡ್‌ಕಾಕನ, ಹಿಂದೆ ಬಂದ ಜನಗಳ
ಸಮದಾನ ಮಾಡಿ, ತೆಂಕದಿಕ್ಕಿಗೆ ಮುಕ ಮಾಡಿ, ಅಡಿಬೊಗ್ಗಿ
ಕಣ್ಣೀರ್ ಹಾಕಿಕಂಡ್ ಕಾಲಾದಿಗೆ ನಾ ಬಾವೆಂತ ಹೇಳಿ ಹೊರ್ಟ್‌ಹೋತ್
ಬಲೀಂದ್ರ ಚಕ್ರವರ್ತಿ ಪಾತಾಳ ಲೋಕಕೆ
ಹೋ.........ಹೋ............ಹೋ........... ಕೂ–ಕೂ–ಕೂ
ಸಿರಿ, ಸಿರಿ, ಸಿರಿ, ಬಲೀಂದ್ರ...............ಕೂ–ಕೂ–ಕೂ

# ಬಲೀಂದ್ರನ ಕತೆ

ಹತ್ತ್ ಕುಟುಂಬ ಹದಿನೆಂಟ್ ಬಳಿ ಕೂಡ್‍ಕಟ್ಟ್‍ನ ನಮ್ಮ ಬಂದು ಬಾಂದೊವು ವರ್ಸ್ ಇಡೀ ಆಚರಣೆ ಮಾಡ್ವ ಹಬ್ಬಗ ತುಂಬಾ ವೊಳೊ. ವರ್ಸಕೊಮ್ಮೆ ಬೆಣ್ತಿಂಗಳ್ಲಿ ಬಾವ ದೊಡ್ಡ ಹಬ್ಬವೇ ದೀಪಾಳಿ (ದೀಪಾವಳಿ) ಅಥವಾ ಬಲೀಂದ್ರ ಹಬ್ಬ. ಈ ಹಬ್ಬನ ನಮ್ಮ ಹಬ್ಬಗಳ ರಾಜಂತ ಹೇಳಕ್. ಹಬ್ಬ ಮತ್ತೆ ಹೊಸ್ತ್, ಹಬ್ಬಗಳ ಅಣ್ಣತಮ್ಮಂದರ್‍ಂತ ಹೆಸ್ರ್ ಪಡ್ದೊಳೊ. ಈ ಹಬ್ಬ ಅಮಾಸೆ ದಿನಂದ ಮೂರು ದಿನ ಗೌಜಿಲಿ ನಡ್ದದೆ. ಇದ್ ತುಳು ಸಂಪ್ರದಾಯದ ಹಬ್ಬಂತ ಕಂಡ್ ಬಂದರೂ ನಾವು ಬಾರಿ ಪುರಾಕ್‍ಂದಳೇ ಬಲೀಂದ್ರ ಹಬ್ಬನ ಆಚರೆಣೆ ಮಾಡ್ತಾ ವೊಳೊ.

ಬೂಮಿಲಿ ಬಾರಿ ಅನ್ಯಾಯ  ಅತರ್ವಣ ಮಾಡ್ತಿದ್ದ ನರಕಾಸುರಂತ ಹೇಳ್ವ ಒಬ್ಬ ರಾಕ್ಷಸನ ಶ್ರೀ ಕೃಷ್ಣ ದೇವ್ರ್ ಕೊಂದ್ ಬೂಮಿ ಬಾರ ಇಳ್ಸಿದ ದಿನ. ಅದರ ನೆಂಪುಲಿ ಈಗ ನರಕ ಚತುರ್ದಶಿ ದಿನ ಮೈ ಕೈಗೆ ಎಣ್ಣೆ ಪೂಜಿ ಬಿಸಿ ನೀರ್ ಮಿೊಯುವ ಪದ್ದತಿಯೂವುಟ್ಟು. ಬಲೀಂದ್ರ ಹಬ್ಬದ ಆಚರಣೆ ಪುರಾಣ ಕಾಲಲಿ ನಡ್ದ ಒಂದು ಮುಖ್ಯ ಗಟನೆನ ನೆಂಪು ಮಾಡ್ವದಿನ. ಕೊಟ್ಟ ಮಾತಿನಂಗೆ ನಡ್ದ್ ಬಲಿಚಕ್ರವರ್ತಿ ಬೂಮಿ ಮೇಲೆ ಒಂದು ಆದರ್ಸ ಹಾಕಿದ್ ಕಂಡದೆ.

ಸಿರಿ ಬಲೀಂದ್ರ ಬೂಮಿ ಪುತ್ರ ಬಲೀಂದ್ರ ಎಲ್ಲಿ ಹುಟ್ಟಿತ್ ಎಲ್ಲಿ ಬೆಳ್ತ್, ಏನ್ ಮಾಡ್ತ್, ಎಲ್ಲಿ ಹೋತ್ ಮತ್ತೆ ಏನಾತ್‍ಂತ ಕೇಳ್ರೆ, ಒಂದು ದೊಡ್ಡ ಕತೆನೇ ವುಟ್ಟು. ಬಾರತ ದೇಸದ ಸುತ್ತ ಮುತ್ತ ಇರ್ವ್ ಅಲ್ಲಿ ಕಡಲ್, ಸುಲ್ಲಿ ಕಡಲ್, ನೀರ್ ಕಡಲ್, ಹಾಲ್ ಕಡಲ್, ಕೊಲ್ಲಿ ಕಡಲ್, ನೆತ್ರ್ ಕಡಲ್, ಮಂಜಿಕಡಲ್, ಪಾಮಜಿ ಕಡಲ್‍ನ ನಡುಲಿರ್ವ್ ಜಂಬೂ ದೀಪಂತ ಹೆಸ್ರ್‍ನ ದೇಸಲಿ ಜಾತಿಲಿ ಮೇಲೆ, ನ್ಯಾಯ ನೀತಿಲಿ ದೇಸಕ್ಕೆ ಅರ್ಸಾಗಿ ರಾಜ್ಯ ಆಳ್ತಿತ್ತ್ ಬೂಮಿ ಪುತ್ರ ಬಲೀಂದ್ರ.

ಬಲೀಂದ್ರನ ಕಾಲಲಿ, ವರ್ಸಲಿ ಮೂರ್ ಉತ್ಸವ, ಕಾಲಕಾಲಲಿ ಪರ್ವಗಳ ಆಚರಣೆ, ಪರ್ವಕಾಲಲಿ ಹೋಮ, ಹೋಮದೊಟ್ಟಿಗೆ ದರ್ಮನೇಮ ನಡೆತಿತ್ತ್ ಗಡ. ಪ್ರಜೆಗಳಿಗೆ ಕೈತುಂಬಾ ದಾನ ದರ್ಮ

ನಡೆತಿತ್ತ್. ಹಗಲೂ ರಾತ್ರೆ ಸಾವಿರಾರ್ ಜನಕೆ ಬೂರಿ ಬೋಜನ ನಡೆತಿತ್ತ್ ಇಂವನ ರಾಜ್ಯಲಿ ಬಡವುಂತ ಯಾರೂ ಇಲ್ಲೆ. ದಿನ ದಿನವೂ ಹಬ್ಬ ಆಚರಣೆ ನಡೆತಾ ಇತ್ತ್, ಬಲೀಂದ್ರ ಪ್ರಜೆಗಳ ಸ್ವಂತ ಮಕ್ಕಳಂದ ಹೆಚ್ಚಿಗೆ ನೋಡಿಕಂಡ್ ಇತ್ತ್, ಇವನ ಪ್ರಜೆಗೆಲ್ಲಾ ಬಾರಿ ಕುಸಿಲಿ ರಾಜನ ಹೊಗ್ಳ್ಯತ ಸಂತೋಸಲಿ ಇದ್ದೊ

ಬಲೀಂದ್ರ ಚಕ್ರವರ್ತಿ ಹೆಸ್ರ್ ಹೋದ ದೊಡ್ಡ ಹಳ್ಳದ ಕರೆಲಿ, ಪುಣ್ಯದ ಜಾಗೆಲಿ ನೇಮ, ಹೋಮ ನಡ್ಸಿಂಗಂಡ್ ಇತ್ತ್. ಮೂಡ ಬುಡ್‌ಕೆ ಮುಂದೆ ಎದ್ದ್ ಸಾವಿರ ಸಾವಿರ ಕೊಡ್ಪಾಣ ಬಿಸಿ ನೀರ್, ತಣ್ಣೀರ್ ಮಿಂದ್ ಸುದ್ದ ಆತಿತ್ತ್. ಸಿರಿಮುಡಿ ಕಟ್ಟಿ ಸಿಂಗಾರ ಮಾಡ್ಕೆ ಕಾವೂರಿನ ಕರಿಪಟ್ಟೆ, ಬೋಳೂರ ಬೆಳಿ ಪಟ್ಟೆ, ಮಣೇಲಿನ ಅರ್ಸಿನ ಪಟ್ಟೆ, ಇಟ್ಟೇಲ್‌ಂದ ಪಚ್ಚೆ ಪಟ್ಟೆ, ಕಾಸಿನ ಕಂಬಾಯಿ, ಮುನ್ನೂರ್ ಮೊಳದ ಪಾರ್ ಪರ್ದೇಸಿ ಪಟ್ಟೆ, ಕಣ್ಣೂರ್ನ ಕಾಂಚಿ ಪಟ್ಟೆ, ಕೈ ಉಗುರ್‌ಲಿ ಅಡ್‌ಂಗುವ ಮದವೂರಿನ ಮಾರ್ ಪಟ್ಟೆ, ಏಳ್ ಪೆಟ್ಟಿಗೆಂದ ಪಟ್ಟೆ ಸೀರೆ ತೆಗ್ದ್ ಮೈಗೆ ಹಾಕಿ ಸಿಂಗಾರ ಮಾಡ್ತ್ ಗಡ. ಬಕ್ತಿಗೆ ಬಸ್ಮ ಪೊರ್ಲ್‌ಗೆ ಗಂದ, ಚಂದನ ಪೂಜಿಕಂತ್ ಬಲೀಂದ್ರ. ಚಿನ್ನದ ಆಬರಣ ಎದೆಗೆ ಮುತ್ತಿನ ಪದಕ, ಕುತ್ತಿಗೆಗೆ ವಜ್ರದ ಚಕ್ರಸರ, ಪೊರ್ಲಿಗೆ ನೆಲ್ಲಿಸರ, ಗೆಲುವಿಗೆ ಗೆಲುವಂದ ಮಾಲೆ, ಕಟ್ಟಿಗಂತ್. ಸೊಂಟಕೆ ಒಡ್ಯಾಣ, ಕೈಗೆ ಕೈಕಡಗ, ಬೇರ್ಲ್‌ಗೆ ಮುತ್ತಿನ ಮುದ್ರೆ ಉಂಗಿಲ, ಬಾಳ್‌ಕತ್ತಿ, ಬಿಲ್‌ಬಾಣ ಕೈಲಿ ಹಿಡ್ದ್ ಬುದ್ಯಂತ, ಪ್ರದಾನಿನ ಕರ್ಸಿತ್‌ಗಡ ಬಲೀಂದ್ರ ಅರಮನೆಗೆ.

ಹೋಮ ನೇಮದ ಯಾಗಕ್ಕೆ ಐದ್ ಬಣ್ಣದ ಕುದ್ರೆನ ತರ್ಸಿತ್ ಬಲೀಂದ್ರ. ಯಾಗದ ಕುದ್ರೆಗೆ ಆರತಿ ಮಾಡಿ, ಕಾಲಿಗೆ ಬೆಳ್ಳಿ ಸಿರಿಗೆಜ್ಜೆ ಕಟ್ಸಿತ್ ರಾಜ ಬಲೀಂದ್ರ. ಕುದುರೆನ ಕುತ್ತಿಗೆಗೆ ಮುತ್ತಿನ ಮಾಲೆ, ತಲೆಗೆ ಚಿನ್ನದ ತಲೆ ಪಟ್ಟಿ ಹೂ, ಪಿಂಗಾರಂದ ಸಿಂಗಾರ ಮಾಡ್ತ್ ಬಲೀಂದ್ರ.

ಯಾಗದ ಕುದ್ರೆಗೆ ಸಿಂಗಾರ ಮಾಡಿ ತಲೆಗೆ ಯಾಗದ ಒಕ್ಕಣೆ ಬರ್ದ್ ಕಟ್ಸಿತ್ ಬಲಿಚಕ್ರವರ್ತಿ. ದಂಡ್‌ನ ದಳವಾಯಿ ಅಂವನ ಸಾಯಕೆ ಸಾಮಂತರ್ನ ಕಳ್ಸಿ ಯಾಗದ ಸುದ್ದಿ ಗೊತ್ತಾಕೆ ಅರಮನೆ ದೋಲು ಗುದ್ದಿ ಸಬ್ದ ಮಾಡ್ದೊ. ಜಾಗಟೆ, ನಗಾರಿ, ಸಂಕ, ಕೊಂಬು, ಕಹಳೆ ಉರ್ಗಿ ಬಾರಿ ದೊಡ್ಡ ಸಬ್ದ ಕೇಳ್ತ್ ಇಡೀ ಊರಿಗೆ. ಸುತ್ತ ಮುತ್ತ ಎಂಟ್ ದಿಕ್ಕಿಲಿರ್‍ವ ಅರುಸು ಬಲ್ಲಾಳ, ಜೈನಸೆಟ್ಟಿ, ವ್ಯಾಪರವರ್ಗ, ಮಠದ ಜಂಗಿಜಂಗಮರ್, ಸನ್ಯಾಸಿ ಬೈರಾಗಿಗ, ಹಳ್ಳಿ ಪೇಟೆ ಜನ, ಕಾಡ್ ಗುಡ್ಡೆಲಿರುವ ಜನಗ, ಬಡಂವ ದೊಡ್ಡಂವಂತ ಎಲ್ಲವು ಸರಿ ಸಮಯಲಿ ಅರಮನೆ ಎದ್ರ್ ಬಂದ್ ಸೇರ್ಕೆ

ಕಟ್ಟಪ್ಪಣೆ ಮಾಡಿ ಓಲೆ ಬರ್ದ್ ಕಳ್ಸಿತ್ ಬಲಿಚಕ್ರವರ್ತಿ ಅರಮನೆಂದ ದಂಡನ ವೀಳ್ಯ ತಕಂಡ್ ನಗಾರಿ ದೋಲು ಸಬ್ದ ಮಾಡಿಕಂಡ್, ಕೊಂಬು ವಾದ್ಯ ದೋಲು ಗುದ್ದಿಕಂಡ್ ಬಲೀಂದ್ರ ಬಾವುದರ ನೋಡಿ ಸುತ್ತಮುತ್ತ ಇದ್ದ ಅರ್ರು ಬಲ್ಲಾಳ್‌ಗ, ಜೈನ ಸೆಟ್ಟಿಗ, ಊರಿನ ಶ್ರೀಮಂತರ್ ರಾಜಂಗೆ ಕಪ್ಪ ಕಾಣಿಕೆ ಕೊಟ್ಟು ಸಾಕಾರ ಮಾಡ್ವೆ. ಬಲೀಂದ್ರನ ಯಾಗದ ಕುದ್ರೆ ದಂಡಿನ ಒಟ್ಟಿಗೆ ಬಾತಾ ಇರ್ವ್ವ ಅಬ್ಬರನೋಡಿ ಸ್ವರ್ಗ ಲೋಕಲಿರ್ವ್ವ 33 ಕೋಟಿ ದೇವತೆಗಳಿಗೆ ಬಾರಿ ಹೆದ್ರಿಕೆ ಸುರು ಆತ್. ಬಲೀಂದ್ರನ ರಾಜ್ಯಲಿ ನಡೆವ ಯಾಗದ ಸುದ್ದಿ ಕೇಳಿ ಮನ್ಸಿಲಿ ಮಚ್ಚರ ಸುರು ಆತ್. ಈ ಯಾಗ ಮಾಡ್ರೆ ಅಂವನ ಬಗ್ಗಿಸಿಕೆ ಸಾದ್ಯ ಇಲ್ಲಂತ ಮಾತಾಡ್ತಿದ್ದೊ. ಈಗ ಅಂವ ನಡ್ಸುದು 99 ನೇ ಯಾಗ, ಇನ್ನ್ ಒಂದು ಯಾಗ ಪೂರ್ತಿ ಮಾಡ್ರೆ ನಾವು ಇಂದ್ರ ಪಟ್ಟ ಅಂವಂಗೆ ಸಂಪ್ರದಾಯ ಪ್ರಕಾರ ಬುಟ್ಟು ಕೊಡುವ ದಿನ ಬಂದದೆಂತ ಚರ್ಚೆ ಸುರು ಆತ್. ದೇವತೆಗ ನಾಕ್ ರಾತ್ರೆ ಮೂರ್ ಹಗಲ್ ಸಬೆ ಸೇರಿ ಒಂದು ಉಪಾಯ ಕಂಡ್ ಹಿಡ್ದೊ. ಆ ಪ್ರಕಾರ 'ಕಲಿಯುಗ'ಂತ ಕರೆವ ಒಂದು ದುಸ್ಟ ಸಕ್ತಿನ ಸಭೆಗೆ ಕರ್ದ್ ನೀ ಹೋಗಿ ಬಲೀಂದ್ರನರಾಜ್ಯಲಿ ಕೊಲೆ, ಸುಲಿಗೆ, ಅನ್ಯಾಯ ಅದರ್ಮ ಮಾಡಿ ಅಂವ ನಡ್ಸುವ ಯಾಗನ ಕೆಡ್ಸಿ ಬರೊಕುಂತ ಬೂಳ್ಯ ಕೊಟ್ಟು ಕಳ್ಸಿದೊ ಗಡ.

ಬಲೀಂದ್ರನ ಯಾಗ ಸಾಲೆಲಿ ಬಾರಿ ಗೌಜಿಲಿ ಯಾಗ ನಡೆತಾ ಇದ್ದ ಜಾಗೆಗೆ "ಕಲಿಯುಗ" ಬಂದ್ ಬಾರಿ ಅನಾವುತ ಮಾಡ್ಕೆ ಸುರು ಮಾಡ್ತ್. ಬಲೀಂದ್ರಂಗೆ ಉಗ್ರ ರೂಪಲಿ ಸಿಟ್ಟ್ ಬಂದ್, ಊರಿನ ಬಲ್ಲಾಳ ಮತ್ತೆ ಜನಗಳ ಕರ್ದ್ "ಕಲಿಯುಗನ" ಬಲ್ದ ಕಾಲಿಗೆ ಚಿನ್ನದ ಸಂಕೋಲೆ ತರ್ಸಿ ಕಟ್ಟಿತ್, ಎಡ್ದ ಕಾಲಿಗೆ ಬೆಳ್ಳಿಸಂಕಲೆ, ಸೊಂಟಕೆ ಗಟ್ಟಿನ ಕಬ್ಬಿಣದ ಸಂಕಲೆ ತರ್ಸಿ ಕಟ್ಟಿ ಹಾಕಿತ್, ಕೈ ಕಾಲ್ ಕಟ್ಟಿ ಬೂಮಿಗೆ ಹೆಜ್ಜೆ ಇಸದಂಗೆ ಅಟ್ಟಲಿ ಹಾಕ್ಸಿತ್ ಬಲಿಚಕ್ರವರ್ತಿ.

ದೇವತೆಗ ಮಾಡ್ದ ಮಚ್ಚರ ಅನಾವುತನ ಗ್ರೇಸಿ ಅವುಕೆ ಒಂದು ಸರಿಯಾದ ಪಾಟ ಕಲ್ಸೊಕುಂತ ನಿಗಂಟ್ ಮಾಡಿ ಯುದ್ದಕೆ ತಯಾರ್ ಮಾಡ್ಕೆ ಬಂಟ್ರಿಗೆ ಜನಕಳ್ಸಿ ಸೈನ್ಯ ಸೇರ್ಸಿಕೆ ಅಪ್ಪಣೆ ಮಾಡ್ತ್ ಬಲೀಂದ್ರ. ರಾಜನ ಕಟ್ಟಪ್ಪಣೆ ಪ್ರಕಾರ ಆನೆಗಳ ಸಾಲ್‌ಲಿ ಆನೆ, ಕುದ್ರೆಗಳ ಸಾಲ್‌ಲಿ ಕುದುರೆಗ ರತಗಳ ಸಾಲ್‌ಲಿ ರತಗಳ ನಿಲ್ಸಿತ್. ಬಿಲ್ಲವುಕೆ ಬಿಲ್ಲ್ ಬಾಣ, ಬಂಟ್ರ್‌ಗೆ ಕೊಡ್ಲಿ, ಕಾಲಾಳಿಗೆ ಕತ್ತಿ, ಕುದಂಟಿ, ಸಬ್ಬಲ್, ಬೇರೆ ಬೇರೆ ಆಯುದಗಳ ಕೊಟ್ಟು ಸೈನ್ಯ ತಯಾರಾತ್. ಸೈನ್ಯ ದಳವಾಯಿಗೆ ಕಡ್ತಲೆ, ಕುದ್ರೆ ಸಿಪಾಯಿಗೆ

ಕುದ್ರೆ, ಆನೆ ಮಾವುತರ ಆನೆ ಸಾಲ್‌ಲಿ ನಿಲ್ಲಿಸಿ, ದಂಡ್ ಹೊರ್ಡುವ ಸೂಚನೆ ಕೊಟ್ಟು ಮಾರಿದೋಲು ಗುದ್ದಕೆ ಸುರು ಆತ್. ಸಂಕ ಜಾಗಟೆ ಕೊಂಬು ಕಹಳೆ ನಗಾರಿನ ಬಾರಿ ಸಬ್ದ ಸುರು ಆತ್. ದೊಡ್ಡ ಚತುರಂಗ ಬಲದ ಸೈನ್ಯ ಕೂಡ್ಸಿ ಬಲೀಂದ್ರ ದೇವತೆಗಳ ಮೇಲೆ ಯುದ್ದಕೆ ಹೊರ್ಟ್ಟತ್. ದೇವತೆಗಳ ರಾಜ್ಯಕ್ಕೆ ನಾಕ್ ಕಡೆಂದ ಮುತ್ತಿಗೆ ಹಾಕಿದ ಸೈನ್ಯ ಏಳ್ ರಾತ್ರೆ ಎಂಟ್ ಹಗಲು ಯುದ್ದ ಮಾಡಿ ದೇವತೆಗಳ ಸೋಲ್ಸಿ ಓಡ್ಸಿತ್ ಗಡ.

ಅರ್ವತ್ತಾರ್ ಕೋಟಿ ರಾಕ್ಷಸ ಸೈನ್ಯ ಮುತ್ತಿಗೆ ಹಾಕಿ ರಾಜ್ಯಕ್ಕೆ ಹುಗ್ಗ್‌ಕನ ಮೂವತ್ತಮೂರು ಕೋಟಿ ದೇವತೆಗ ಸುತ್ತಿದ ಸೀರೆಲಿ, ಕಟ್ಟಿದ ತಲೆ ಮುಂಡಾಸ್‌ಲಿ, ಮನೆ ಮಾರ್ ಬೆಳ್ಳಿ ಬಂಗಾರ, ದನ ಕರ್ ಮಕ್ಕ ಮೊರಿ, ಊರ್‌ಕೇರಿನ ಬುಟ್ಟು ಜೀವ ಒಳ್ದರೆ ಸಾಕ್‌ಂತ ಓಡಿ ಹೋಗಿ ಅಂಡ್ಗಿ ಕುದ್ದೊಗಡ, ಅಂಡ್ಗಿ ಕುದ್ದ ಜಾಗೆನ ಹುಡ್ಕಿ, ಹುಡ್ಕಿ ದೇವತೆಗಳ ದೂರ ಅಟ್ಟಿತ್ ಬಲಿ ಚಕ್ರವರ್ತಿ, ಗೆದ್ದ ಬೂವಿನ ಬಾರಿ ಸುಕ ಸಂತೋಸಲಿ ಆಳ್‌ತ್ತಿತ್ ಬಲೀಂದ್ರ.

ಬಲೀಂದ್ರನ ಕೈಲಿ ಸೋತ್ ಹೋದ ದೇವತೆಗ ಅವನ ಸೋಲ್ಸ್‌ಕೆ ಆಗದೆ ಏಳ್ ರಾತ್ರೆ, ಎಂಟ್ ಹಗಲ್ ಅನ್ನ ನೀರ್ ಬುಟ್ಟು, ಹೊಟ್ಟೆ ಬಾಯಿ ಕಟ್ಟಿ, ಬಾರಿ ಬೇಜಾರಿಲಿ ಕಣ್ಣೀರ್ ಹಾಕಿಕಂಡ್ ತಲೆ ತಲೆ ಹೊಡ್ಕಂಡ್ ಬೇರೆ ಉಪಾಯ ಕಾಣದೆ ಮೇಲೆನ ಲೋಕಲಿರ್ವ ಶ್ರೀ ನಾರಾಯಣ ದೇವ್ರಿಗೆ ಹೋಗಿ ಬಲೀಂದ್ರನ ಮೇಲೆ ದೂರೂ ಕೊಟ್ಟೊ ಗಡ.

ದೇವತೆಗಳ ದುಕ್ಕದ ಬೊಬ್ಬೆ ಕೇಳಿ ಹಾಲ್ ಕಡಲ್‌ಲಿ ಏಳ್ ಜಡೆ ಆದಿ ಸೇಸನ ಮೇಲೆ ಮಲ್ಗಿದ ನಾಕ್ ಕೈ ನಾರಾಯಣ ದೇವ್ರ್ ಎದ್ದ್ ಕುದ್ದ್, ಪಕ್ಷಿ ವಾಹನ ಗಿಡ್ಗನ ಮೇಲೆ ಆಕಾಸ ಮಾರ್ಗಲಿ ಬಂದ್ ದೇವತೆಗಳ ರಾಜ ಇಂದ್ರನ ಕರ್ದ್ ನ್ಯಾಯ ನೀತಿಲಿ ರಾಜ್ಯಬಾರ ಮಾಡ್ವ ಬಲೀಂದ್ರಂದ ನೀವ್ಗೆ ಏನ್ ತೊಂದರೆ ಆತ್‌ಂತ ಇಚಾರ್ಸಿದೋ ನಾರಯಣ ದೇವ್ರ್. ನಾರಾಯಣ ದೇವ್ರ ಕಾಲಿಗೆ ಅಡ್ಡಬಿದ್ದ್ ಸ್ವಾಮಿ ಬಲೀಂದ್ರ ನೂರು ಯಾಗ ಮಾಡಿ ಪೂರೈಸಿರೆ ಸ್ವರ್ಗದ ಇಂದ್ರ ಪಟ್ಟ ಅಂವಂಗೆ ಹೋದ್ದೆ ಇದ್‌ಕ್ಕೆ ನೀವು ಒಂದು ಪರಿಹಾರ ಮಾಡೊಕುಂತ ಮತ್ತೆ ಮತ್ತೆ ನಾರಾಯಣ ದೇವ್ರ್ ಕಾಲಿಗೆ ಅಡ್ಡ ನೀಟ ಬಿದ್ದದೆ ದೇವೇಂದ್ರ.

ನಾರಾಯಣದೇವ್ರು ದೇವತೆಗಳ ಸಮದಾನ ಮಾಡಿ ನಾ, ನೀವ್ಗೆ ಬೇಕಾಗಿ ಬಾಲ ಬ್ರಹ್ಮಚಾರಿನ ಏಸಲಿ ಯಾಗ ಯಜ್ಞ ನಡೆವ ಜಾಗೆಗೆ ಹೋಗಿ ಮೂರು ಮೆಟ್ಟ್ ಬೂಮಿನ ದಾನ ಕೇಳ್ನೆ. ದಾನ ದರ್ಮಲಿ

ಬಲೀಂದ್ರ ಯಾಗೋಳು ಬಾರಿ ಮುಂದೆ ಉಪಾಯಲಿ ಅಂವನ ಸೋಲ್ಸಿ ನಿಮ್ಮ ರಾಜ್ಯನ ನೀವ್ಗೆ ತೆಗ್ಸಿ ಕೊಟ್ಟನೆಂತ ದ್ಯೆರ ಹೇಳಿ ಗಿಡ್ಡನ ಮೇಲೆ ಕುದ್ದು ಆಕಾಸ ಮಾರ್ಗಲಿ ಹೊರ್ಟ್ ಹೋದೊ ನಾಕ್ ಕೈ ನಾರಾಯಣ ದೇವ್ರು.

ಸಿರಿ ನಾರಾಯಣ ದೇವ್ರು ಎಲ್ಲಿ ಹುಟ್ಟಿದೊ ಎಲ್ಲಿ ಬೆಳ್ದೊ ಏನ್ ಮಾಡ್ದೊಂತ ಕೇಳ್ಕನ, ಜಂಬೂದೀಪಲಿ ಹಾಲ್‌ಕಡಲ್‌ಲಿ ಮುತ್ತು ಬೇಳೆವ ಕೆರೆಲಿ ಬೆಳಿ ತಾವರೆ ಹೂನ ಎಸಲ್‌ಲಿ ಮೂರು ಕುಸುಮಲಿ ನಾರಾಯಣ ದೇವ್ರ ಜನ್ಮ ಆತ್‌ಗಡ. ಅಲ್ಲಿಂದ ಸಣ್ಣ ಬಾಲ ಬ್ರಹ್ಮಚಾರಿ ಮಾಣಿನ ಏಸಲಿ ಅವತಾರ ಎತ್ತಿದೊ

ಬಾಲ ಬ್ರಹ್ಮಚಾರಿ ಏಸದ ಮಾಣಿ ಬಲ್ದ ಬುಜಲಿ ಚಿನ್ನದ ಸಂಕಮಾಲೆ, ಎಡ್ದ ಬುಜಲಿ ಬೆಳ್ಳಿನ ಸಂಕಮಾಲೆ, ಬಲ್ದ ಹೆಗ್‌ಲಿಲಿ ಚಿನ್ನದ ಜನಿವಾರ, ಎಡ್ದ ಹೆಗ್‌ಲ್‌ಲಿ ಬೆಳ್ಳಿ ಜನಿವಾರ, ಬಲ್ದ ಕೈಲಿ ಚಿನ್ನದ ಸಿರಿಗಿಂಡಿ, ಎಡ್ದ ಕೈಲಿ ತೊಳ್ಸಿ ಮಾಲೆ, ತಕಂಡ್ ಮೂಡ ಬುಡ್‌ಕೆ ಮುಂದೆ ಸುದ್ದಕೆ ತಲೆ ಮ್ಯೆ ಮಿಂದ್ ಸೊಂಟಕೆ ನೆವಳಕಟ್ಟಿ ತುಂಡುಪಂಚೆನ ಸುತ್ತಿ, ಬಕ್ತಿಗೆ ಮ್ಯೆ ಕೈಗೆ ಬಸ್ಮ ಹಾಕಿಕಂಡ್ ಗಂದ ಚಂದನ ಮ್ಯೆಗೆ ಪೂಜಿಕಂಡ್ ಹಣೆಲಿ ಉದ್ದನಾಮ ಹಾಕಿ, ಬೆನ್ನಿಗೆ ಸಾರಂಗದ ಚರ್ಮನ ಕಟ್ಟಿಕಂಡ್ ಜಪಕ್ಕೆ ಜಪಮಾಲೆ ಕೈಲಿ ಹಿಡ್ದ್ ಬೆದರ್‌ಕೋಲು ಊರಿಕಂಡ್ ಬಿಸಿಲಿಗೆ ಪನೆಕೊಡೆ ಹಿಡ್ದ್, ಕಾಲಿಗೆ ಮರದ ಕಡಾವು ಹಾಕಿಕಂಡ್, ಬೂಮಿಗೆ ಅಡ್ಡಬಿದ್ದ್, ಮೂಡಕೆ ಮೋರೆ ಹಾಕಿ ನಿದಾನಲಿ ಹೆಜ್ಜೆ ಹಾಕ್‌ತಾ ಬಾಯಿಲಿ ದೇವ್ರ್ ಜಪ ಮಾಡಿಕಂಡ್ ಬಲೀಂದ್ರನ ಯಾಗ ಸಾಲೆಗೆ ಹೊರ್ಟತ್ ಬಾಲ ಬ್ರಹ್ಮಚಾರಿ ಮಾಣಿ.

ಬಲೀಂದ್ರ ರಾಜಂಗೆ ಪಡ್ವದ ಸಮುದ್ರ ಕರೆಂದ ಗಟ್ಟದ ಬುಡಕ್ಕೆ ಮುಟ್ಟ ದೊಡ್ಡ ರಾಜ್ಯ ವುಟ್ಟು. ಅಂವ ಈಗ ಮಾಡ್ತಾ ಇರ್ಪ್ವ ಯಾಗ ಸಾಲೆಗೆ ಹೋಗಿ ಅಂವನ ದಾನ ದರ್ಮನ ನೋಡೊಕು. ದರ್ಮನೇಮ ನಡ್ಸಿದೆ, ಅನ್ನದಾನ, ವಸ್ತ್ರದಾನ, ಗೋದಾನ, ಬೂಮಿದಾನ ಕೊಟ್ಟು ಬಾರಿ ಗೌಜಿಲಿ ಯಾಗ ಮಾಡ್ತಾ ವುಟ್ಟು ಬೂಮಿ ಪುತ್ರ ಬಲೀಂದ್ರ, ದಾನ ದರ್ಮಲಿ ಹೆಸ್ರ್ ಪಡ್ದ ಬಲೀಂದ್ರನ ಹಕ್ಕಲೆ ಮೂರು ಮೆಟ್ಟ್ ಬೂಮಿದಾನ ಕೇಳೊಕುಂತ ಮನ್ಸಿಲಿ ಗಟ್ಟಿ ಮಾಡ್ತ್ ಬಾಲಬ್ರಹ್ಮಚಾರಿ. ಅಂವ ದಾನ ಕೊಟ್ಟರೆ ಒಂದು ಮೆಟ್ಟ್ ಜಾಗೆಲಿ ಮನೆ, ಕೆರೆಬಾಮಿ ತೊಂಡ್ಸೊಕು, ಚಾಳೆ ಬಾಳೆ ನಡ್ಸೊಕು, ಕೇನೆ ಕೆಸ ಕೃಷಿ ಮಾಡೊಕು ಕಟ್ಟಪುಣಿ ಹಾಕಿ ಕಂಬಳ ಪೂಕರೆ ಮಾಡ್ಸೊಕುಂತ ಮನ್ಸಿಲಿ ನೆನ್ಸಿತ್

ಇನ್ನೊಂದು ಮೆಟ್ಟ್ ಬೂಮಿಲಿ ದೇವ್ರ್‌ಗೆ ದೇವಸ್ತಾನ, ಬೂತಗಳಿಗೆ

ಮಾಡ, ಬೆರ್ಮರಿಗೆ ಗುಂಡ, ಕಟ್ಟಿ ನೇಮ, ತೇರ್, ಬಲಿ ಮಾಡೊಕುಂತ ಅಂದಾಜಿ ಮಾಡ್ತ್ ಬಾಲ ಬ್ರಹ್ಮಚಾರಿ. ಇನ್ನೊಂದು ಮೆಟ್ಟ್ ಬೂಮಿಲಿ ಜನಿವಾರ ಹಾಕಿದವುಕೆ ನೀತಿಲಿ ನಡೆಕೆ ವ್ಯವಸ್ತೆ ಮಾಡುವ ನಿಚ್ಚಯ ಮಾಡಿ ಯಾಗ ಸಾಲೆ ಕಡೆ ಬಾತಾ ವುಟ್ಟು ಬ್ರಹ್ಮಚಾರಿ ಮಾಣಿ.

ದೂರಂದಲೇ ಬಾತಾ ಇರ್ವ್ ಸಣ್ಣ ಹೈದನ ಹಕ್ಕಲೆ ಹೋಗಿ ಬಲೀಂದ್ರ ಕೇಳ್ದೆ, "ಯಾರ್ ಸ್ವಾಮಿ ನೀವು" ಸಮುದ್ರ ದೇವತನಾ? ನಮ್ಮ ಉಂಟು ಮಾಡ್ದ ಶ್ರೀ ನಾರಾಯಣ ದೇವ್ರಾ? ನಾಕ್ ಮೋರೆನ ಬ್ರಹ್ಮದೇವ್ರಾ? ಮೂರ್ ಕಣ್ಣ್‌ನ ಈಶ್ವರ ದೇವ್ರಾಂತ? ಕೇಳಿ ಎತ್ತರದ ಮಣೆ ಮೇಲೆ ಬ್ರಹ್ಮಚಾರಿನ ಕುದ್ರಿಸಿ ಎಡ್ದ್ ಬಲ್ದಿಗೆ ಕಾಲ್‌ದೀಪ ಹೊತ್ಸಿ ಇಸಿತ್ ಬಲೀಂದ್ರ. ಕಾಲಿಗೆ ಅಡ್ಡ ಬಿದ್ದ್ ಕಾಲ್ ತೋಳ್ದ್ ತೀರ್ತತಕಂಡ್, ಸ್ವಾಮಿ ನೀವು ಎಲ್ಲಿಂದ ಬಾತಾವೋಳರಿ, ನಿಮ್ಮ ನೋಡಿ ನನ್ನ ಎಲ್ಲಾ ಬೇನೆ ಬೇಜಾರ್ ದೂರಾತ್,ನನ್ನ ಸಂಸಾರದ ಕಷ್ಟ ಪರಿಹಾರ ಆಗಿ ಸಂತೋಸ್ ಆತ್.ನಿಮ್ಮ ದಿಕ್ಕ್ ದೇಸ, ಅವ್ವ ಅಪ್ಪ ಯಾರಂತ ಕೇಳಿ ಕಾಲಿಗೆ ಅಡ್ಡನೀಟ ಬೀತ್ ಬಲೀಂದ್ರ.

ಮೂರ್ ಲೋಕನ ಆಳ್ತಾ ಇರ್ವ್ ರಾಜ ನೀನೇ ನನ್ನ ಯಜಮಾನ, ನನ್ನ ಅಪ್ಪ ದೊಡ್ಡ ಸನ್ನೇಸಿಂತ ಹೇಳ್ತ್ ಬ್ರಹ್ಮಚಾರಿ. ನಿನ್ನ ರಾಜ್ಯಲಿ ದರ್ಮಕೆ ಹೋಮ, ಪುಣ್ಯಕೆ ನೇಮ, ಕೇಳ್ದ ದಾನ ಕೊಡುವಂತ, ಹೇಳಿ ದಾನ ಕೇಳ್ಕೆ ನಾ ಇಲ್ಲಿಗೆ ಬಂದಳೆಂತ ಹೇಳ್ತ್ ಗಡ ಬಾಲಬ್ರಹ್ಮಚಾರಿ. ನೀವ್ಗೆ ಅನ್ನದಾನ, ವಸ್ತ್ರದಾನ,ಗೋದಾನ, ಚಿನ್ನ ಬೆಳ್ಳಿ ಸಂಪತ್ತ್ ಯಾವುದು ಬೇಕಾರು ನಾ ಕೊಟ್ಟನೆಂತ ಬಲೀಂದ್ರ ಮಾತ್ ಕೊಟ್ಟತ್. ಅನ್ನದಾನ ಕೊಟ್ಟರೆ ತಿಂದ್‌ವುಂಡು ಮುಗೆದು, ವಸ್ತ್ರದಾನ ಕೊಟ್ರೆ ಹರ್ದ್ ಹಾಳಾದು, ಗೋದಾನ ಕೊಟ್ರೆ ಹೆಬ್ಬುಲಿ ತಿಂಬೊದು,ಬೆಳ್ಳಿ ಬಂಗಾರ ಕೊಟ್ರೆ ಕಳ್ಳಕಾಕರ ಪಾಲಾದು. ಇಂತ ಯಾವ ದಾನವೂ ನಂಗೆ ಬೇಡ. ನಿಂಗೆ ಗಟ್ಟದ ಬುಡಂದ ಸಮುದ್ರಕರೆ ಮುಟ್ಟ ದೊಡ್ಡ ರಾಜ್ಯ ವುಟ್ಟು. ನಂಗೆ ಬರಿ ಮೂರ್ ಮೆಟ್ಟ್ ಊರುವಷ್ಟು ಬೂಮಿ ದಾನ ಕೊಟ್ರೆ ಸಾಕಂತ ಬ್ರಹ್ಮಚಾರಿ ಹೇಳ್ತ್.

ನಿಂಗೆ ಮನ್ಸಿದ್ದರೆ ನಾ ಕೇಳ್ದ್ ಮೂರು ಮೆಟ್ಟ್ ಜಾಗೆನ ದಾನಕೊಡು, ನಿಂಗೆ ಮನ್ಸಿಲ್ಲೆಂತಾದರೆ ಬಂದದಾರಿಲೇ ನಾ ಹಿಂದೆ ಹೋನೆಂತ ಕುದ್ದಲ್ಲಿಂದ ಎದ್ದ್‌ದ್ ಬ್ರಹ್ಮಚಾರಿ.

ಆ ಹೊತ್ತಿಗೆ ಬಲೀಂದ್ರ ಹೇಳ್ದೆ "ಓ ದೇವ್ರೆ ಯಾಕೆ ಇಂತ ಸಿಟ್ಟ್‌ನ ಮಾತ್! ನೀವ್ಗೆ ನಾ ಮೂರು ಹೆಜ್ಜೆ, ಮೂರು ಊರು, ಮೂರು ದೇಸ,

ಮೂರು ರಾಜ್ಯದ ಅದಿಕಾರ ಕೊಡ್ವೆ" ಮನೆ ಮಾರ್, ದನಕರ್, ಬೆಳ್ಳಿ ಬಂಗಾರ, ಆನೆ ಕುದ್ರೆ, ಮುತ್ತು ಮಾಣಿಕ್ಯ, ಮಡಿ ಪಟ್ಟೆ, ಜಪಕ್ಕೆ ಕೊಟೆಗೆ, ಮಿೊಯಕೆ ದೊಡ್ಡ ಕೆರೆ, ಅಡಿಗೆ ಮನೆ ಕೆಲ್ಸ ಮಾಡ್ಕೆ ಲ್ಯಾಕ್‌ನ ಗೂಡೆಗಳ ಮದುವೆ ಮಾಡ್ಸುವೆಂತ ಹೇಳಿ, ನನ್ನ ಹಿರಿಯವು ವೊಳೊ ಅವರೊಟ್ಟಿಗೆ ಒಂದು ಮಾತ್ ಕೇಳಿ ಹೇಳ್ನೆ, ನಾಳೆ ಬೆಳಿಗ್ಗೆ ಅರಮನೆಗೆ ಬನ್ನಿ. ರಾತ್ರೆ ನಮ್ಮಲ್ಲಿ ನಿತ್ತ್ ಸುಕ ಸಂತೋಸಲಿ ಊಟ, ನಿದ್ದೆ ಮಾಡಿಂತ ಬಲೀಂದ್ರ ಹೇಳ್ತ್.

ವಿಸಯ ತಿಳ್ದ ಬಲೀಂದ್ರನ ಅಣ್ಣ ಸುಕ್ರಾಚಾರ್ಯ ತಮ್ಮನ ಒಳ ಕೋಣೆಗೆ ಕರ್ದ್ ಬೇಜಾರ್ಲಿ ಬುದ್ದಿವಾದ ಹೇಳ್ವೆ. ನನ್ನ ಮಾತ್‌ನ ಕೆಬಿ ಕೊಟ್ಟು ಕೇಳ್ ಬಲೀಂದ್ರ, ಇಲ್ಲಿಗೆ ಬಂದ್ ನಿನ್ನೊಟ್ಟಿಗೆ ಬೂಮಿ ದಾನ ಕೇಳ್ದ್ ಬ್ರಹ್ಮಚಾರಿನ ಯಾರ್‌ಂತ ನೆನ್ಸಿಯಳ? ಮೋಸ ಮಾಡಿ ಉಪಾಯಲಿ ನಿನ್ನ ರಾಜ್ಯನ ಮೇಲೆನ ಲೋಕಲಿರ್ವ ದೇವತೆಗಳಿಗೆ ಕೊಡ್ಕೆ ನಾಕ್ ಕೈ ನಾರಾಯಣ ದೇವ್ರ್ ಆಡ್‌ವ ಆಟಂತ ಬಗೆತಾರಲಿ ಹೇಳ್ದೊ ಸುಕ್ರಾಚಾರ್ಯರ್. ಯಾವ ಕಾರಣಕ್ಕೂ ನೀ ಬೂಮಿ ದಾನ ಕೊಡ್‌ಕೆ ಒಪ್ಪು ಬಡ. ಬ್ರಹ್ಮಚಾರಿಗೆ ಕೇಳ್ದಷ್ಟ್ ಬೆಳ್ಳಿ ಬಂಗಾರ, ಮನೆ ಮಾರ್, ದನಕರ್, ಆನೆ ಕುದ್ರೆ, ಕೊಡು, ಬೂಮಿದಾನ ಕೊಟ್ರೆ ನಿನ್ನ ರಾಜ್ಯ ಎಲ್ಲಾ ಹೋದ್ದೆಂತ ಗುಟ್ಟ್‌ಲಿ ಬಲೀಂದ್ರಂಗೆ ಹೇಳ್ದೊ ಸುಕ್ರಾಚಾರ್ಯರ್.

ಅಯ್ಯೋ, ಅಣ್ಣ ಸಿರಿಲಕ್ಷ್ಮಿದೇವಿನ ಯಜಮಾನನ ಕೈ ಕಾಗಡೆ ನನ್ನ ಕೈ ಮೇಗಡೆ, ಹುಟ್ಟಿಸಿದ ಶ್ರೀ ನಾರಾಯಣ ದೇವ್ರು ದಾನ ಕೇಳ್ಕನ, ಅವರ ನಂಬಿ ದೇವ್ರ್‌ರೆ ಕೊಟ್ಟ ಸಂಪತ್ತ್‌ನ ಅವುಕ್ಕೇ ಹಿಂದೆ ಕೊಡಿಕೆ ತಪ್ಪಿ ನಾ ನರ್ಕಕ್ಕೆ ಹೋಕೆ ತಯಾರಿಲ್ಲೆ. ಬಂದಂವ ಬಾಲ ಬ್ರಹ್ಮಚಾರಿ ಆಗಲಿ, ನಾಕ್ ಕೈ ದೇವ್ರ್ ಆಗಲಿ, ನಾಕ್ ತಲೆಂವ ಆಗಲಿ, ಮೂರ್‌ಕಣ್ಣ್‌ನಂವ ಆಗಲಿ, ಸಮುದ್ರ ಇಂಗಿ ಬರ್ಡ್ಡಾಗಲಿ, ಸೂರ್ಯ, ಚಂದ್ರ ಆಗಲಿ, ಚಂದ್ರ ಸೂರ್ಯ ಆಗಲಿ, ರಾತ್ರೆ ಹಗಲಾಗಲಿ, ಹಗಲ್ ರಾತ್ರೆ ಆಗಲಿ ನಾ ಮಾತ್ರ ಕೊಟ್ಟ್ ಮಾತಿಗೆ ತಪ್ಪಿಕಿಲ್ಲೆಂತ ಮನ್ಸ್ ಗಟ್ಟಿ ಮಾಡಿ ಹೇಳ್ತ್ ಬಲೀಂದ್ರ. ಕೂಡ್ಲೆ ಬ್ರಹ್ಮಚಾರಿನ ಯಾಗ ಸಾಲೆಗೆ ಕರ್ಕಂಡ್ ಬಾಕೆ ದೂತನ ಕಳ್ಸಿತ್ ಬಲೀಂದ್ರ.

ಬಂದ ದೂತನ ನೋಡಿ ಸುದ್ದಕೆ ತಲೆಮೈ ಮಿೊದ್, ಭಕ್ತಿಲಿ ಬಸ್ಮ ಹಾಕಿ, ಗಂದ ಚಂದನ ಮೈಗೆ ಪೂಜಿಕಂಡ್, ಸಿಂಗಾರ ಮಾಡಿಕಂಡ್ ಬ್ರಹ್ಮಚಾರಿ ಮಾಣಿ ಯಾಗದ ಸಾಲೆಗೆ ಬಂದ್ ಮುಟ್ಟಿತ್. ಯಾಗ ಸಾಲೆಗೆ ಬಂದ ಮಾಣಿನ ಹಕ್ಕಲೆ ಕರ್ದ್ ಮಾಣಿಕ್ಯದ ಮಣೆ ಮೇಲೆ ಕುದ್ರಿಸಿ ಹದಿನಾರ್ ಬಗೆ

ಪೂಜೆ ಮಾಡಿ, ಕಾಲ್ ತೊಳ್ದ್ ಪಾದ ಪೂಜೆ ಮಾಡ್ತ್. ಕೈಹಿಡ್ದ್ ಹೇಣ್ಣ್‌ನ ಹಕ್ಕಲೆ ಕರ್ದ್ ಚಿನ್ನದ ಗಿಂಡಿಲಿ ಪಿಂಗಾರ, ತೊಳ್ಸಿಕೊಡಿ ಇಸಿ ಬೂಮಿ ದಾರೆ ಎರ್ದದೆ ಬಲೀಂದ್ರ. ಆಗ ಕೊಂಬಿನಗಿಂಡಿ ಎಷ್ಟ್ ಬಗ್ಸಿರೂ ನೀರು ಬೀಳುದೆಲ್ಲೆ. ಇದರ ನೋಡಿ ಬಾಲ ಬ್ರಹ್ಮಚಾರಿ ಮಾಣಿ ಒಂದು ದರ್ಬೆನ ತೆಗ್ದ್ ಗಿಂಡಿನ ಕೊಂಬಿಗೆ ಕುತ್ತಿದೆ. ಆಗ ನೀರ್ನ ಬದ್ಲ್ ನೆತ್ರ್ ದಾರೆ, ದಾರೆ ಬಂದದೆ. ಇದ್ ಏನ್ ವಿಸ್ಮಯಂತ ನೊಡ್ಕನ ಸುಕ್ರಾಚಾರ್ಯ ಒಂದು ಕಣ್ಣಿಗೆ ಕೈ ಹಿಡ್ಕಂಡ್ ಗಿಂಡಿಂದ ಹೊರಗೆ ಬಂದವೆ. ಅಣ್ಣ ಸುಕ್ರಾಚಾರ್ಯರ ಒಂದು ಕಣ್ಣ್ ಹೊಟ್ಟಿ ಹೋದ್ ಗೊತ್ತಾತ್. ಅಂದಿನ ದಿನಂದ ಒಕ್ಕಣ್ಣ್ ಸುಕ್ರಾಚಾರ್ಯಂತ ಅವುಕೆ ಹೆಸ್ರ್ ಬಾತ್. ಚಿನ್ನದ ಸಿರಿಗಿಂಡಿಲಿ ತೊಳ್ಸಿಕೊಡಿ ಇಸಿ ಬೂಮಿದಾನ ಎರ್ದ್ ಕೊಟ್ಟತ್ ಬಲೀಂದ್ರ ಚಕ್ರವರ್ತಿ.

ಸಿರಿ ಬಲೀಂದ್ರ, ಬೂಮಿ ಪುತ್ರ ಬಲೀಂದ್ರ, ಮೂರು ಲೋಕದ ರಾಜ ಬಲೀಂದ್ರ ಚಿನ್ನದ ಸಿರಿಗಿಂಡಿಲಿ ದಾರೆ ಹೊಯ್ದ್ ನೀರ್ ಬೂಮಿಗೆ ಬಿದ್ದ ಕೊಡ್ಲೆ ಬಾಲ ಬ್ರಹ್ಮಚಾರಿ ಮಯಾ ಆತ್. ಬ್ರಹ್ಮಚಾರಿನ ಜಾಗಲಿ ತ್ರಿವಿಕ್ರಮ ಪ್ರತ್ಯಕ್ಷ ಆತ್, ಅಂವನ ತಲೆ ಸ್ವರ್ಗ ಲೋಕಕೆ ತಾಂಗಿದೆ, ಬಲ್ದ ಕೈ ಮೂಡದ ಸಮುದ್ರ ಎಡ್ದ ಕೈ ಪಡ್ವದ ಸಮುದ್ರನ ದಾಟಿ ಕಂಡದೆ. ನಿತ್ತ ಹೆಜ್ಜೆಲಿ ತೆಂಕ್ ದಿಕ್ಕಿಗೆ ಒಂದ್ ಕಾಲ್ ಇನ್ನೊಂದು ಕಾಲ್ ಬಡ್ಗ್ ದಿಕ್ಕಿಲಿ ನಿತ್ತುಟು, ಇಂತ ಬಾರಿ ಗಾತ್ರದ ತ್ರಿವಿಕ್ರಮನ ಅಂಗಾಲ್ ಅಡಿಲಿ ಏಳ್ ಲೋಕ, ಮುಂಗಾಲ್ ಮೇಲೆ ಮೇಲೆನ ಏಳ್ ಲೋಕಗ ಕಂಡವೆ, ಕಾಲ್‌ಗಂಟಿಲಿ ಗುಡ್ಡೆ ಪರ್ವತಗ ಕಂಡದೆ, ಮೊಣ್ಕಾಲಿ ಹಾರಾಡ್‌ವ ಹಕ್ಕಿಗ, ತೊಡೆ ಬಾಗಲಿ ಹಿಮ ಪರ್ವತಗ, ಸುತ್ತಿದ ಪಂಚೆಲಿ ರಾತ್ರಿ ಹಗಲ್ ಕಂಡದೆ. ಸೊಂಟಲಿ ರಾಕ್ಷಸರ್ ಹೊಕ್ಕುಳ್‌ಲಿ ಆಕಾಸ ಕಾಯಗ ಕಂಡ್ ಬಂದದೆ. ಆಸಮಯಲಿ ತ್ರಿವಿಕ್ರಮನ ಒಡ್ಲಲಿ ಏಳ್ ಸಮುದ್ರಗ ಎದೆ ಬಾಗಲಿ ಕಲ್ಪವೃಕ್ಷ ಕಂಡ್ ಬಾತ್. ತ್ರಿವಿಕ್ರಮನ ಕಾಲಿಂದ ತಲೆ ಮುಟ್ಟ ಬೂಮಿ, ಆಕಾಸ, ಪಾತಾಳ, ಬೂತಗ, ದೈವ ದೇವ್ರು, ರಾಕ್ಷಸ ಪಿಸಾಚಿಗ, ಪಕ್ಷಿ ಪ್ರಾಣಿಗ, ಹುಲಿ, ದನಕರ್ ಆನೆ ಕುದ್ರೆ, ಹಾವು ಎಲಿ, ಹೆಗ್ಗಣ, ಮೊಸಳೆ, ಜಿಂಕೆ ಕಡವೆ, ಕುರೆ ಸಿಂಗ್ಲೀಕ ಎಲ್ಲಾ ತರದ ಜೀವ ಜಂತುಗ ವಿಚಿತ್ರ ರೀತಿಲಿ ಕಾಂಬೊತಿತ್ತ್. ಈ ರೂಪನ ನೊಡ್ದ ನರ ಮೊನ್ಸರ್ ತಲೆತಿರ್ಗಿ ಬಿದ್ದ್ ಹೋದೊ.

ನಿತ್ತ ಮೆಟ್ಟ್‌ಲಿ ಬೂಮಿನ ಅಳ್ತೆ ಮಾಡ್ದ ತ್ರಿವಿಕ್ರಮ ಮತ್ತೊಂದು ಮೆಟ್ಟ್‌ಲಿ ಆಕಾಸನ ಆಳ್ತ್ ಮೊರ್ನೆ ಹೆಜ್ಜೆಗೆ ತಯಾರಾದ ಹೊತ್ತಿಗೆ ತ್ರಿವಿಕ್ರಮ ಮಾಯ ಆಗಿ ನಾಕ್ ಕೈ ನಾರಾಯಣ ದೇವ್ರ್ ಬಲೀಂದ್ರನ ಎದ್ರ್ ನಿತ್ತ್ ಕೇಳ್ವೆ ಗಡ.

ನಿನ್ನ ಹಿರಿಯವು ಕೊಟ್ಟ ಮಾತಿಗೆ ಪ್ರಾಣ ಕೊಟ್ಟವು. ಅವರ ಸಂತಾನಲಿ ಹುಟ್ಟಿದ ನೀ ಅವರ ಹೆಸ್ರ್‌ಗೆ ಕುಂದು ತರ್ಬಡ, ನಿನ್ನಮಾತಿನಂಗೆ ದಾನ ಕೊಡದ ಅರ್ರುನ ನಾಗರ ಬೆತ್ತದ ಬಳ್ಳಿಲಿ ಕೈ ಕಾಲ್ ಕಟ್ಟಿ ಹಾಕಿಕೆ ಗರುಡಂಗೆ ಅಪ್ಪಣೆ ಮಾಡ್ತ್. ನೀ ಹೇಳ್‌ದ ಮಾತ್ ಉಟ್ಟಾ ಇಲ್ಲೆಂತ ಮೇಲೆ ಮೇಲೆ ನಾರಾಯಣ ದೇವ್ರ್ ಬಲೀಂದ್ರನ ಕೇಳ್ವೆ.

ಬಲೀಂದ್ರ ಬಾರಿ ದುಕ್ಕಲಿ ಹೇಳ್ದೆ, ಸ್ವಾಮಿ ನಾರಾಯಣ ದೇವ್ರೆ, ನಾ ಕೊಟ್ಟ್ ಮಾತಿಗೆ ನನ್ನ ಎದೆ ಮೇಲೆ ದಾರಿ ಕೊಡ್ವೆಂತ ಹೇಳಿ ಅಂಗಾತ ಬೂಮಿಲಿ ಮಗ್ಲಿತ್ ಬಲೀಂದ್ರ. ಹಾಂಗೆ ನೆಲಲಿ ಬಿದ್ದ ಬಲೀಂದ್ರ ಇನ್ನೊಂದು ಮೆಟ್ಟುಜಾಗೆ ನನ್ನ ತಲೆ ಮೇಲೆ ತಕಣಿಂತ ಹೇಳ್ದೆ.

ಬಲೀಂದ್ರ ಸತ್ಯ ನ್ಯಾಯದಂಗೆ ನಡ್ದ್ ಬೂಮಿ ದಾನ ಕೊಟ್ಟ ಕಾರ್ಣ ಶ್ರೀ ನಾರಾಯಣ ದೇವ್ರ್ ಅಂವನ ಕೈ ಕಾಲಿಗೆ ಕಟ್ಟಿದ ಬೊಳ್ಳಿ ಬಿಚ್ಚಿದೊ. ನೀ ಇನ್ನ್ ಇಲ್ಲಿ ನಿಲ್ಲಿಕೆ ಸಾದ್ಯ ಇಲ್ಲೆ. ಅಲ್ಲಿಸಮುದ್ರ, ಕೋಲ್ಲಿ ಸಮುದ್ರ, ಸುಳಿ ಸಮುದ್ರ, ಪಾಮಜಿ ಸಮುದ್ರ, ನೆತ್ರ್ ಸಮುದ್ರ, ನೀರ್ ಸಮುದ್ರ, ಹಾಲ್ ಸಮುದ್ರಂದ ದೂರಲಿರ್ವ ಪಾತಾಳ ಲೋಕಕೆ ಹೋಗಿ ರಾಜ ಇಲ್ಲದ ಆ ರಾಜ್ಯಲಿ ನೀ ನ್ಯಾಯ ನೀತಿಲಿ ರಾಜ್ಯಬಾರ ಮಾಡುಕುಂತ ನಾಕ್ ಕೈ ನಾರಾಯಣ ದೇವ್ರ್ ಹೇಳ್ವೆ. ಓ ನಾರಾಯಣ ದೇವ್ರೆ, ನೀವು ನನ್ನ ಉಪಾಯಲಿ ಮಂಕ್ ಮಾಡಿ, ಮೊಸಲಿ ಸೋಲ್ಸಿದ್ ಈಗ ನಂಗೆ ಅರ್ತ ಆತ್, ನಾ ನೀವು ಹೇಳ್‌ದಾಂಗೆ ಪಾತಾಳಕ್ಕೆ ಹೋಗಿ ರಾಜ್ಯಬಾರ ಮಾಡ್ನೆಂತ ಮಾತ್ ಕೊಟ್ಟತ್ ಬಲೀಂದ್ರ. ಆದರೆ ನೀವು ಪಾತಾಳ ರಾಜ್ಯಕ್ಕೆ ಬಂದ್ ನನ್ನ ಕಷ್ಟಕ್ಕೆ ಸಹಾಯ ಮಾಡೊಕುಂತ  ಕಾಲಿಗೆ ಅಡ್ಡ್ ಬಿದ್ದ್ ಬೇಡಿಕಂತ್ ಬಲೀಂದ್ರ

ಕಾಲಿಗಡ್ಡ ಬಿದ್ದ ಬಲೀಂದ್ರನ ಕೈಹಿಡ್ದ್ ಎದ್ರಿಸಿ ಮೈ ಕೈ ಪೂಜಿ, ಬೆನ್ನ್ ತಟ್ಟಿ ನಾರಾಯಣ ದೇವ್ರ್ ಹೇಳ್ವೆ, ಬಲೀಂದ್ರ ನಿನ್ನ ರಾಜ್ಯನ ರಕ್ಷಣೆ ಮಾಡಿ ಬೆಳೆಸಲೆನ ಕಾಯವೆ, ನಿನ್ನ ಬದ್‌ಕ್‌ಬಾಗ್ಯನ ಕುಂದುತಾರದೆ ಕಾಯವೆ, ನೀ ಇರ್ವಷ್ಟ್ ದಿನ ನಿನ್ನ ರಾಜ್ಯ ಆಳಿಕಂಡ್ ಸುಕ ಸಂತೋಸಲಿ ಇರ್ವಂಗೆ ಸಾಯ ಮಾಡ್ವೆಂತ ಕೈ ಹಿಡ್ದ್ ಬಾಸೆ ಕೊಟ್ಟೊ ನಾರಾಯಣ ದೇವ್ರ್.

ಓ, ನಾಕ್ ಕೈ ನಾರಾಯಣ ದೇವ್ರೆ, ದರ್ಮಕೆ ಓಮ, ಪುಣ್ಯಕೆ ನೇಮ, ಯಾಗ ಸಾಲೆಲಿ ನಡೆತಾ ಉಟ್ಟು. ಇದರ ಮುಗ್ಸಿ ಓಕುಳಿ ಮಾಡದೇ ಹೋದರೆ ನಾ ನರ್ಕಕ್ಕೆ ಹೋವೆ. ಹಾಂಗೆ ನನ್ನ ನೇಮ ಹೋಮಕ್ಕೆ ಓಕುಳಿ ಮಾಡ್ಸಿ ವಿಳ್ಯಕೊಟ್ಟು ಕಳ್ಸೊಕುಂತ ದೇವ್ರ ಕಾಲಿಗೆ ಅಡ್ಡಬೀತ್.

ಬಲೀಂದ್ರ ಮಾಡ್ದ ಓಮ ನೇಮಕೆ ಓಕುಳಿ ಮಾಡ್ಸಿ, ಅರ್ಸಿನ ನೀರ್‌ಲಿ ಅಂವನ ಮೀಸಿ, ರಾಜನ ಮಾಡಲಿದ್ದ ಪ್ರಜೆಗಳಿಗೆ ಅವು ಕೇಳಿದಷ್ಟು ಕೇಳ್ದ ದಾನ ದರ್ಮ ಮಾಡ್ಸಿ ಅರ್ಕ್ಯನ ಒಟ್ಟೆ ದೋಣಿಲಿ ಕುದ್ರಿಸಿ  ಮಾಯಣದ ಮೋಟು ಜಳ್ಳ ಕೊಟ್ಟು, ಹೊಡಿ ಅವಲಕ್ಕಿ, ಗೋಟ್ ಕಾಯಿನ ಬುತ್ತಿ ಕಟ್ಟಿ ಹೋಗುಂತ ನಾರಾಯಣ ದೇವ್ರ್, ಬಲೀಂದ್ರ್ರಂಗೆ ಹೇಳ್ವೆ. ಆದ್ರೂ ಬಾರಿ ಬೇಜಾರ್ಲಿ ಹಿಂದೆ ತಿರ್ಗಿ ತಿರ್ಗಿ ನೋಡಿ ಕಂಡ್ ಬಲೀಂದ್ರ ಹೇಳ್ದೆ, ಸ್ವಾಮಿ ಈ ನನ್ನ ಅರಮನೆ, ನನ್ನ ಆನೆ ಕುದುರೆ, ಅರಸು ಬಲ್ಲಾಳ್‌ಗ ನನ್ನ ಪ್ರೀತಿನ ಪ್ರಜೆಗಳ, ದನಕರ್ ನನ್ನ ಆಸ್ತಿ ಸಂಪತ್ತ್‌ನ ಯಾಗ ನೋಡ್ದುಂತ ಕಡೆ ಕಣ್ಣಿಲಿ ಕಣ್ಣೀರ್ ಹಾಕಿಕಂಡ್ ಜೋರ್ಲಿ ಮರ್ಗ್ವಗಂಡ್ ಪ್ರಜೆಗಳ ನೋಡಿ ಅಲ್ಲೆ ನಿತ್ತತ್ ಬಲೀಂದ್ರ.

ಬಲೀಂದ್ರನ ಚಿಂತೆ, ದುಕ್ಕನ ನೋಡಿ ನಾರಾಯಣ ದೇವ್ರ್ ಹೇಳ್ವೆ  ಓ, ಬೂಮಿ ಪುತ್ರ ಬಲೀಂದ್ರ ನಿನ್ನ ರಾಜ್ಯ ಅರಮನೆ ನೋಡಿಕೆ ವರ್ಸಕೊಮ್ಮೆ ಆಟಿ ಅಮಾಸ್ಯೆ ದಿನ ಆಳ್‌ನ ಕಳ್ಸಿ ತಿಳ್ಕ, ಸೋಣ ತಿಂಗ ಸಂಕ್ರಾಂತಿಗೆ ನಿನ್ನ ಅವ್ವನ ಕಳ್ಸಿ ವಿಸಯ ತಿಳ್ಕ, ಬೆಣ್ತಿಂಗಳ ಅಮಾಸೆಗೆ ಆರ್‌ದಿನ ಬಲಿ ಮೂರ್ ದಿನ ಪೊಲಿನ ದೀಪಾವಲಿ ಹಬ್ಬಕೆ ನೀ ಬಂದ್ ನಿನ್ನ ರಾಜ್ಯದ ಬೆಳೆಗಿಳೆ, ಬದ್‌ಕ್‌ಬಾಗ್ಯ, ನಿನ್ನ ಪ್ರೀತಿನ ಪ್ರಜೆಗಳ ನೋಡಿ ಸುಕ ದುಕ್ಕ ವಿಚಾರ್ಸಿ ಹೋಗ್‌ಂತ ಶ್ರೀ ನಾರಾಯಣ ದೇವ್ರ್ ಹೆಳ್ದೊಗಡ. ಈ ರಾಜ್ಯದ ನೂಲ್ ಹಾಕಿದೊವು, ಜೋಗಿ ಜಂಗಮ, ಮಠದ ಸ್ವಾಮಿಗ ಅರಮನೆ ಜನಗ, ಗುತ್ತು ಬರ್ಕೆದವು, ಬೂಡುನವು, ಬಲ್ಲಾಳ್‌ಗ, ಬೆಟ್ಟ್ ಗದ್ದೆವು, ಸ್ತಾನ ಮಾನದವು ಸೆಟ್ಟಿ ಸಾವುಕಾರ್ ಗಟ್ಟದ ಬುಡಂದ ಸಮುದ್ರ ಕರೆ ವರೆಗಿರುವ ಮೀನ್‌ಮುಗ್ಗರ್, ಮೂರ್ತೆದಾರರ್ ಎಲ್ಲಾ ಜನಗ ಕೇಳಿಂತ ನಾರಾಯಣ ದೇವ್ರ್ ಹೇಳ್ದೊ.

ಕಾಲಕಾಲಕೆ ಒರ್ಸಕೊಮ್ಮೆ ಆಟಿ ಅಮಾಸೆ ಸೋಣ ಸಂಕ್ರಾಂತಿ, ಬೆಣ್ತಿಂಗ ದಿಪಾವಲಿ ದಿನ ನಿಮ್ಮ ಬೆಳೆಗಿಳೆ ದನಕರ್, ನೊಗ ನೇಗ್ಲ್, ಕೊಟ್ಟು ಪಿಕ್ಕಾಸ್, ತಡ್ಪೆ, ವನಲೆ ಬೆಳ್ಳಿ ಬಂಗಾರ, ಹೂ, ಪಿಂಗಾರಲಿ ಸಿಂಗಾರ ಮಾಡಿ ದೂಪ ದೀಪ ಹೊತ್ಸಿ ಮಕ್ಕ ಮರಿ ಒಟ್ಟಿಗೆ ಪೂಜೆ ಮಾಡಿ, ಮನೆ ಮನೆ ಹಬ್ಬ ಮಾಡಿ ಗದ್ದೆ ಪುಣಿಲಿ ದೀಪ ಇಸಿ ಕೈ ಮುಗಿಯೊಕು. ಮನೆ ಬಾಗಲ್ ಎದ್ರ್ ಬೊಳ್ಕುಮರ ಹಾಕೊಕು, ಸ್ತಾನ, ಚಾವಡಿಲಿ ಬೊಳ್ಕುಮರ  ಹಾಕೋಕು. ಆರ್ ದಿನದ ಬಲಿ, ಮೂರ್ ದಿನದ ಪೊಲಿಂತ ಹೇಳಿ ಬಲೀಂದ್ರನ ಪೂಜೆ ಮಾಡೊಕುಂತ ಸಿರಿ ನಾರಾಯಣ ದೇವ್ರ್ ನಾಡಿನ ಜನಕೆ ಕಟ್ಟಪ್ಪಣೆ ಮಾಡ್ವೆ.

ಗಟ್ಟದ ಬುಡಂದ ಸಮುದ್ರ ಕರೆವರೆಗೆ ಇರ್ಪ್ ಜನಗ ದೀಪಾವಲಿ ದಿನ ಬಲೀಂದ್ರ ಪೂಜೆ ಮಾಡೊಕು. ನಾಕ್ ವರ್ಣ ನಾನ್ನೂರು ಜಾತಿನ ಜನಗ ಇದಕ್ಕೆ ತಪ್ಪಿರೆ ಅವರ ಸಂಪತ್, ಕೃಷಿ, ದನಕರ್ ಕೈಗೆ ಸಿಕ್ಕದ್. ಅವರ ಮನೆಮಟ ನಾಸ ಆದು. ಕಾಯಿಲೆ ಕಸಾಲೆ ಬಂದ್ ದಿನ ನಿತ್ಯ ಜಗಳ ಕೂನಿ ನಡೆದು, ಮಹಾಮಾರಿ ಕಾಯಿಲೆ ಬಂದ್ ಜನ ಪ್ರಾಣ ಕಳ್ಕಂಬೊ. ಹೊಟ್ಟೆಗೆ ಅನ್ನ ಇಲ್ಲದೆ ಕತ್ತಲೆಗೆ ಏನ್ ಮಾಡ್ದು, ಬೆಳಿಗ್ಗೆಗೆ ಏನ್ ಮಾಡ್ದುಂತ ಯಾಗೋಳ್ ದುಕ್ಕಲಿ ಕಳೆವ ದಿನ ಬಾದುಂತ ಕಣ್ಣೀರ್ ಹಾಕಿ ಬೂಮಿ ಮುಟ್ಟಿ ಸಾಪ ಕೊಟ್ಟೊ ನಾರಾಯಣ ದೇವ್ರ್.

ಸಿರಿನಾರಾಯಣ ದೇವ್ರ್ ಬಲೀಂದ್ರಂಗೆ ಹೇಳ್ವೆ. ಓ, ಬೂಮಿಪುತ್ರ ಬಲೀಂಂದ್ರ, ನೀ ಇನ್ನ್ ಮೇಲೆ ಮನ್ಸಿಲಿ ದುಕ್ಕ ಮಾಡ್ಬಡ. ಇನ್ನ್ ಮುಂದೆ ಕಲ್ಲ್ ಕಾಯಕನ ಬೊಳ್ಗಲ್ ಹೂ ಹೋಕನ, ಉಪ್ಪು ಕರ್ಪೂರ ಆಕನ, ಅಂಗಳ ಪಾರೆ ಆಕನ, ಗೊಡ್ಡಿ ಎಮ್ಮೆ ಕೋಣ ಆಕನ, ಎತ್ತ್ ಕರ್ ಹಾಕ್ಕನ, ತುಂಬೆ ದೈ ಬುಡಲಿ ಕೂಟ ಕೂಡ್ಕನ, ನೆಕ್ಕಿ ಬುಡಲಿ ಆಟ ಆಡ್ಕನ, ಗದ್ದೆ ಗಡಿಗೆ ಪಾಲ ಹಾಕ್ಕನ  ಬೂಲೋಕದ ನಿನ್ನ ರಾಜ್ಯಕ್ಕೆ ಬಂದ್ ಅರಮನೆಲಿ ರಾಜ್ಯಬಾರ ಮಾಡಿಕಂಡ್ ಸುಕಸಂತೋಸಲಿ ಜೀವನ ನಡ್ಸಂತ ಕಟ್ಟಪ್ಪಣೆ ಮಾಡಿ ಬಲೀಂದ್ರನ ಪಾತಳ ಲೋಕಕೆ ಕಳ್ಸಿದೊ ನಾರಾಯಣ ದೇವ್ರ್.

ಸಿರಿ ನಾರಾಯಣ ದೇವ್ರ್ ಕೈಯಿಂದ ಬೂಳ್ಯ ತಕಂಡ್ ಕಾಲಿಗೆ ಅಡ್ಡ ಬಿದ್ದ್ ಹೊರ್ಡ್ವ ಸಮಯಕೆ, ಹಿಂದೆ ಬಂದ ಪ್ರಜೆಗಳ ಸಮಾದಾನ ಮಾಡಿ, ಬುದ್ದಿ ಹೇಳಿ, ತೆಂಕ್ ದಿಕ್ಕಿಗೆ ಮೋರೆ ಹಾಕಿ, ಕಾಲಡಿ ನೋಡಿ–ಕಂಡ್, ಕಣ್ಣೀರ್ ಹಾಕಿಕಂಡ್, ಕಾಲಕಾಲಕೆ ನಾ ಬನ್ನೆಂತ ಜನಗಳಿಗೆ ಬರವಸೆ ಕೊಟ್ಟು ಹೊರ್ಟ್  ಹನಿಯ ದೂರ ಹೋಕನ ಸೂರ್ಯ ಕಂತಿ ಕರ್ಗೂಡು ಕತ್ತಲೆ ಆದ್ದೆ. ಸಿರಿ ನಾರಾಯಣ ದೇವ್ರ್ ಒಪ್ಪಿಗೆ ತಕಂಡ್ ರಾತ್ರೆ ಮತಲಿ ಮಲ್ಗಿ, ಮೂಡ ಬುಡ್‌ಕೆ ಮುಂದೆ ಎದ್ದ್ ಹಳ್ಳ ದಾಟಿ ಆಚೆ ಕರೆ ಪಾತಾಳಕೆ ಎತ್ತಿತ್ ಬೂಮಿ ಪುತ್ರ ಬಲೀಂದ್ರ. ಆ ಊರ ಪೊಲಿ ತಂಬಾ, ಈ ಊರ್‌ನ ಬಲಿ ತಕಂಡ್ ಹೋಗ್

" ಕೂ....ಬಲೀಂದ್ರ, ಕೂ..........ಬಲೀಂದ್ರ,.......ಕೂ ..........ಬಲೀಂದ್ರ





ದಕ್ಷಿಣ ಕನ್ನಡ ಜಿಲ್ಲೆ ಸುಳ್ಯ ತಾಲೋಕ್‌ನ, ಕೊಲ್ಲಮೊಗ್ರ ಗ್ರಾಮದ ಕುಂಞೇಟಿ ಚಿನ್ನಪ್ಪ ಗೌಡ ಮತ್ತೆ ಕಾವೇರಿ ದಂಪತಿ ಮಂಜನಾಗಿ 1944ರ ಮೇ 16ಕೆ ಹುಟ್ಟಿದೊ. ಬಿ.ಎ, ಬಿ.ಎಡ್. ಪದವೀದರರಾಗಿ ಶಿಕ್ಷಣ ಇಲಾಖೆಲಿ 33 ವೊರ್ಸಗಳ ಗೆಯ್ಮೆ ಮಾಡ್ಯೊಳೊ. 1970ರ ಅಗಸ್ಟ್‌ಲಿ ಪದವೀದರ ಮುಖ್ಯೋಪಾಧ್ಯಾಯರಾಗಿ ಇಲಾಖೆಂದ ಆಯ್ಕೆಯಾದೊ. ಶಾಲೆನ ಪರಿವೀಕ್ಷಣಾ ಅಧಿಕಾರಿಯಾಗಿ ಪ್ರೌಢಶಾಲೆನ ಮುಖ್ಯೋಪಾಧ್ಯಾಯರಾಗಿ ಸೇವೆಸಲ್ಸಿ 2002ಲ್ಜಿ ನಿವೃತರಾದೊ. ಕರ್ನಾಟಕ ರಾಜ್ಯ ಮಾಧ್ಯಮಿಕ ಶಿಕ್ಷಕ ಸಂಘ ದಕ್ಷಿಣ ಕನ್ನಡ ಜಿಲ್ಲೆನ ಅಧ್ಯಕ್ಷರಾಗಿ, ರಾಜ್ಯ ಉಪಾಧ್ಯಕ್ಷರಾಗಿ ಕೆಲ್ಸ ಮಾಡಿಯೊಳೊ. ಸಮಾಜಮುಖಿ ಕೆಲ್ಸಗಳ್ಲಿ ತೊಡ್ಗಿಸಿಕಂಡೊಳೊ. ಶಿಕ್ಷಕ ಸಂಘಂದ ಪ್ರಕಟವಾಗ್ತಿರುವ ಮಾಸಪತ್ರಿಕೆ ಶಿಕ್ಷಕವಾಣಿ ಸಂಪಾದಕರಾಗಿ 1995ಲ್ಜಿ ಕೆಲ್ಸ ಮಾಡ್ಯೊಳೊ. ಅರೆಬಾಸೆಲಿ ಕತೆ, ಕವನ, ಲೇಖನಗಳ ಬರಿಯೊದು ಇವರ ಹವ್ಯಾಸ. ಇವು ಅರೆಬಾಸೆಲಿ 'ಜೋನಿ ಬೆಲ್ಲ' ತೇಳುವ ಪುಸ್ತಕ ಪ್ರಕಟಿಸಿಯೊಳೊ. ಹಲವ್ ಸಂಶೋದನಾ ಬರಹ ಬರೆವುಕೆನೂ ಮಾರ್ಗದರ್ಶನ ಮಾಡ್ಯೊಳೊ. ಇವು ಕರ್ನಾಟಕ ಅರೆಬಾಸೆ ಅಕಾಡೆಮಿನ ಮಾಜಿ ಸದಸ್ಯರಾಗಿದ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕೊಡಮಾಡುವ 2021ರ 'ಗೌರವ ಪ್ರಶಸ್ತಿ'ಗೆ ಇವು ಮಾನ್ಯರಾಗೊಳೊ.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಮಡಿಕೇರಿ

ರೂ. 45